ಕಾಯಕವೇ ಕೈಲಾಸ



# ಸಿದ್ಧಗಂಗಾ



ಗುರುವಂದನ ಸಂಚಿಕೆ

ಸಂಪುಟ : ೪೫ ಏಪ್ರಿಲ್ ೨೦೦೮ ಸಂಚಿಕೆ : ೪

ಏಪ್ರಿಲ್ ೧ ರಂದು ಪರಮಪೂಜ್ಯ ಶ್ರೀ ಶ್ರೀಗಳವರು ೧೦೨ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದ ಶುಭ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಪಾದಪೂಜೆ ಮಾಡಿ ಗುರುವಂದನೆ ಸಲ್ಲಿಸಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು ಭಕ್ತಿ ಸಮರ್ಪಿಸಿದರು



ಮುಖ್ಯಮಂತ್ರಿ ಶ್ರೀ ಬಿ.ಎಸ್ ಯಡಿಯೂರಪ್ಪ ಅವರಿಂದ ಭಕ್ತಿ ಸಮರ್ಪಣೆ



ಶಾಸಕ ಶ್ರೀ ವಿ. ಸೋಮಣ್ಣನವರಿಂದ ಭಕ್ತಿ ಸಮರ್ಪಣೆ



ಮಾಜಿ ಸಂಸದ ಶ್ರೀ ಅನಂತಕುಮಾರ್ ಅವರಿಂದ ಭಕ್ತಿ ಸಮರ್ಪಣೆ



ಮುಖಪುಟ
ಪರಮಪೂಜ್ಯ ಶ್ರೀಗಳವರು
೧೦೨ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದ
ಶುಭ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು
ಹಾಗೂ ಗಣ್ಯರಿಂದ ಭಕ್ತಿ ಸಮರ್ಪಣೆ


ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು :
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ – 572 104.

ಛಾಯಾ ಚಿತ್ರಗಳು :
ಬಿ.ಸಿ. ಸುರೇಶ್

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ – 572 104
ದೂರವಾಣಿ : 2280055

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ನಂ. 4, ಎಂ.ಎಸ್. ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್
ಗೋಕುಲ, ಬೆಂಗಳೂರು – 54.
ದೂರವಾಣಿ : 23604087


ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೫ ಏಪ್ರಿಲ್ ೨೦೦೮ ಸಂಚಿಕೆ : ೪


## ಒಳಪುಟಗಳಲ್ಲಿ ..................




ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿಗಳು ರೂ. ೧೦/-

# ನೆನಪು ಮಧುರ ಯಾವಾಗಲೂ ...

*"ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ, ಅಗಿದು ಕಳೆದೆನಯ್ಯಾ ಭ್ರಾಂತಿನಬೇರ. ಒಡೆದು ಸಂಸಾರದ ಹೆಂಟೆಯ, ಬಗಿದು ಬಿತ್ತದೆನಯ್ಯಾ ಬ್ರಹ್ಮಬೀಜವ. ಅಖಂಡ ಮಂಡಲವೆಂಬ ಬಾವಿ, ಪವನವೆ ರಾಟಾಳ, ಸುಷುಮ್ನ ನಾಳದಿಂದ ಉದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹವೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ, ಆವಾಗಳೂ ಈ ತೋಟದಲ್ಲಿ ಜಾಗರವಿದ್ದು ಸಸಿಯ ಸಲಹಿದೆನು ಕಾಣಾ ಗುಹೇಶ್ವರಾ"* – ಈ ವಚನದ ಸಾಕಾರ ರೂಪವೇ ಆಗಿ – ಕರ್ನಾಟಕ ಸಂಸ್ಕೃತಿಯಲ್ಲಿ ಅರಳಿದ ಅಪರೂಪದ ಶಿವಚೇತನ ಸಿದ್ಧಗಂಗಾ ಶ್ರೀಗಳು. ಬಸವಾದಿ ಶರಣರು ಆಚರಿಸಿ ತೋರಿಸಿದ ತತ್ತ್ವಾದರ್ಶಗಳನ್ನು ಈ ಶತಮಾನದಲ್ಲಿ ಕೃತಿಗಿಳಿಸಿದ ಮಹಾನುಭಾವರು. ಅವರೇ ಅನೇಕ ಸಂದರ್ಭಗಳಲ್ಲಿ ಹೇಳುವಂತೆ ಇಂದು ಬೇಕಾಗಿರುವುದು *'ಮಾನವಧರ್ಮ'. 'ಜೀವನವೇ ಯೋಗ ಯೋಗವೇ ಜೀವನ'.* ಅವರೀಗ ನೂರೊಂದು ವಸಂತಗಳನ್ನು ದಾಟಿದ್ದಾರೆ. ನೂರಾ ಎರಡಕ್ಕೆ ಮುನ್ನಡೆದಿದ್ದಾರೆ. ಒಂದು ಯುಗದ ಒಳ–ಹೊರಗನ್ನೆಲ್ಲಾ ತುಂಬಿಕೊಂಡಿರುವ ಪರಿಪೂರ್ಣಯೋಗಿಗಳಾಗಿದ್ದಾರೆ. ಜಗದ ಜಂಗಮರೆನಿಸಿದ್ದಾರೆ. ನಡೆದಾಡುವ ದೇವರಾಗಿದ್ದಾರೆ. ಸದಾ ಲೋಕಕಲ್ಯಾಣವನ್ನೇ ಚಿಂತಿಸುತ್ತಿದ್ದಾರೆ. ಅದಕ್ಕಾಗಿ ಶ್ರಮಿಸುತ್ತಿದ್ದಾರೆ. ಗುರು ಪರಂಪರೆಗೆ ಮೇಲ್ಪಂಕ್ತಿಯಾಗಿದ್ದಾರೆ. ಸಮತೆ ಸೈರಣೆಯ ಮಹಾಶಕ್ತಿಯನ್ನು ಜಗತ್ತಿಗೆ ತೋರಿಸುತ್ತ ಬಂದಿದ್ದಾರೆ. ನುಂಗಿದ್ದಾರೆ. ಲೋಕಕೊಟ್ಟ ನೋವನ್ನು, ಕುಡಿದಿದ್ದಾರೆ. ನೋವಿನ ನಂಜನ್ನು, ಅಳು ನುಂಗಿ ನಕ್ಕಿದ್ದಾರೆ. ನಗೆಯನ್ನೇ ಚೆಲ್ಲುತ್ತ ಬಂದಿದ್ದಾರೆ. ತಮಗಾಗಿ ಏನನ್ನೂ ಬಯಸಲಿಲ್ಲ. ಕೀರ್ತಿವಾರ್ತೆಗೆ ಕಾಮಿಸಲಿಲ್ಲ. ತಮಗೆ ನೀಡಲು ಬಂದ ಪದವಿ ಪ್ರಶಸ್ತಿಗಳನ್ನು ವಿನಮ್ರವಾಗಿ ನಿರಾಕರಿಸಿದ್ದಾರೆ. ಅವರ ಧ್ಯೇಯವೊಂದೇ ಜನ ಬದುಕಬೇಕು, ಶಿವನೊಪ್ಪುವಂತೆ ಬದುಕಬೇಕೆಂಬುದಾಗಿದೆ.

ಕಳೆದ ಫೆಬ್ರವರಿ ೨, ೩ ಮತ್ತು ೪ ರಂದು ಪರಮಪೂಜ್ಯ ಶ್ರೀಗಳ ಜನ್ಮ ಶತಮಾನೋತ್ಸವ ಅವಿಸ್ಮರಣೀಯವಾಗಿ ನಡೆಯಿತು. ಆಚರಿಸಿ ಸಂತೋಷಿಸಿದ ಭಕ್ತ ಜಗತ್ತು ಧನ್ಯತೆಯನ್ನು ಅನುಭವಿಸಿತು. ಆ ಸಮಾರಂಭದ ಸಂಕ್ಷಿಪ್ತ ವರದಿಯನ್ನು ಪತ್ರಿಕೆಯ ಸಂಪಾದಕ ಸ್ನೇಹಿತರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಮತ್ತು ಶ್ರೀ ಎಂ. ರೇಣುಕಾರಾಧ್ಯರು ತಮಗಾಗಿ ಸಿದ್ಧಪಡಿಸಿಕೊಟ್ಟಿದ್ದಾರೆ. ಅವರೀರ್ವರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ. ಈ ಸಂಚಿಕೆಯಲ್ಲಿ ಶ್ರೀಗಳವರನ್ನು ಕುರಿತ ಲೇಖನಗಳನ್ನು ಪ್ರಕಟಿಸಲಾಗಿದೆ. ಶತಮಾನೋತ್ಸವ ಮುಗಿದಿದೆ; ಆದರೆ ನೆನಪು ಮಾಸದಂತೆ ಈ ರೂಪದಲ್ಲಿ ಉಳಿದಿದೆ. 'ಮಳೆ ಬಿಟ್ಟರೂ ಮರದ ಹನಿ ಬಿಡದು' ಎಂಬಂತೆ. ನೆನಪು ಮಧುರ ಯಾವಾಗಲೂ.

– ಸಂಪಾದಕರು





# ಸೇವಾ ಸ್ಮರಣೆ



ಶ್ರೀಮಠದ ಸೇವೆಯಲ್ಲಿ ಜೀವನ ಸಾರ್ಥಕ ಮಾಡಿಕೊಂಡವರು ಒಬ್ಬಿಬ್ಬರಲ್ಲ. ಅವರ ಸೇವೆಯೂ ಒಂದು ತೆರನಾದುದಲ್ಲ. ಅವರೆಂದೂ ತಮ್ಮ ಮನೆ ಬೇರೆ ಮಠ ಬೇರೆ ಎಂದು ಭಾವಿಸಿದವರಲ್ಲ. ಸೇವೆಯಲ್ಲಿ ಸಂತೋಷವನ್ನು ಕಂಡವರು ಅವರು. ಶ್ರೀಮಠಕ್ಕೆ ಬರುವ ಭಕ್ತಾದಿಗಳಿಗೆ ಪ್ರಸಾದ ಸಿದ್ಧಗೊಳಿಸುವ ಸೇವೆಯವರಿಂದ ಮೊದಲುಗೊಂಡು ನೂರಾರು ರೂಪದ ಸೇವಾ ಕಾರ್ಯಗಳಲ್ಲಿ ತಮ್ಮನ್ನು ತಾವು ಕಂಡುಕೊಂಡವರು. ಸದಾ ಉರಿವ ಒಲೆಯ ಮುಂದೆ ಬೇಯುತ್ತಲೇ ಪ್ರಸಾದವನ್ನು ಅಣಿಗೊಳಿಸುವ ಕಾಯಕದಲ್ಲಿ ನಿರತರಾದವರು. ಶ್ರೀಮಠದ ಪಶು ಸಂಪತ್ತನ್ನು ಎಚ್ಚರವಾಗಿ ಪೋಷಣೆ ಪಾಲನೆ ಮಾಡಿದವರು. ಮರ ಗಿಡಗಳನ್ನು ಬೆಳೆಸಿದವರು. ಕಟ್ಟಡಗಳನ್ನು ಕಟ್ಟಿದವರು. ಕಸ ಗುಡಿಸಿದವರು, ಗದ್ದುಗೆಗಳಲ್ಲಿ ನಿತ್ಯ ಪೂಜಾ ಕೈಂಕರ್ಯಗಳನ್ನು ನಡೆಸಿದವರು. ಅತಿಥಿ ಗೃಹಗಳ ಉಸ್ತುವಾರಿಯನ್ನು ನೋಡಿಕೊಂಡವರು. ಮಕ್ಕಳ ಆರೈಕೆಯನ್ನು ಮಾಡಿದವರು. ಅವರ ಕುಂದು ಕೊರತೆಗಳನ್ನು ಗಮನಿಸಿದವರು. ಅವರ ವ್ಯಾಸಂಗದ ಪ್ರಗತಿಯತ್ತ ಎಚ್ಚರವಹಿಸಿದವರು. ಭಕ್ತಾದಿಗಳು ದಾಸೋಹಕ್ಕೆಂದು ಅರ್ಪಿಸಿದ ಧನ–ಧಾನ್ಯಗಳನ್ನು ಒಪ್ಪವಾಗಿ ತಂದೊಪ್ಪಿಸಿದವರು. ಅವುಗಳ ಲೆಕ್ಕವಿಟ್ಟವರು. ಸಂಜೆ ಮುಂಜಾನೆಗಳಲ್ಲಿ ನಡೆಯುವ ಸಾಮೂಹಿಕ ಪ್ರಾರ್ಥನಾ ಸಭೆಯ ವ್ಯವಸ್ಥೆಗಾಗಿ ಸಹಕರಿಸಿದವರು, ಬಂದ ಭಕ್ತಾದಿಗಳಿಗೆ ಮಾರ್ಗದರ್ಶನ ಮಾಡಿದವರು, ಶಿಕ್ಷಕರು, ಆಡಳಿತ ವರ್ಗದವರು, ವಿಶೇಷ ಕಾರ್ಯಕ್ರಮಗಳಾದ ಸಭೆ ಸಮಾರಂಭ ಜಾತ್ರೆ ಹಬ್ಬ ಉತ್ಸವಗಳ ಸಂದರ್ಭದಲ್ಲಿ ಹಗಲೆನ್ನದೆ ಇರುಳೆನ್ನದೆ ಶ್ರಮಿಸಿದವರು, ಹೊಲ ಗದ್ದೆಗಳಲ್ಲಿ ಕೃಷಿಕೃತ್ಯ ಕಾಯಕದಲ್ಲಿ ದುಡಿದವರು, ಶ್ರೀ ಸಂಸ್ಥೆಯ ಆಸ್ತಿ–ಪಾಸ್ತಿಗಳನ್ನು ಸಂರಕ್ಷಿಸುವಲ್ಲಿ ಎಚ್ಚರವಹಿಸಿದವರು, ಶ್ರೀಮಠದ ಕಿಂಚಿತ್ ಸೇವೆಯನ್ನು ತಮ್ಮ ಮಾಧ್ಯಮಗಳ ಮೂಲಕ ಪ್ರಚುರಪಡಿಸಿದವರು, ಸೇವೆಯ ರಹಸ್ಯವನ್ನು ತಮ್ಮ ಉಪನ್ಯಾಸಗಳ ಮೂಲಕ ಜನತೆಗೆ ತಿಳಿಸಿದ ವಿದ್ವಾಂಸರು, ಬಡತನವನ್ನೇ ಹಾಸಿಹೊದ್ದುಕೊಂಡಿದ್ದರೂ ಒಂದು ಕುಂಬಳಕಾಯಿ, ಒಂದು ಸೇರು ರಾಗಿ, ಒಂದು ಪಾವು ಅವರೆಕಾಳು, ಒಂದು ಹಿಡಿ ಹುಣಿಸೆಹಣ್ಣುಗಳನ್ನು ಭಕ್ತಿಯಿಂದ ತಂದರ್ಪಿಸಿದ ಕಪಟವರಿಯದ ಗ್ರಾಮೀಣ ಬಂಧುಗಳು ಸ್ಮರಣೀಯರಾಗಿದ್ದಾರೆ. ಎಲ್ಲರ ಸಹಕಾರದ ಶ್ರೀರೂಪವೇ ಶ್ರೀಮಠವಾಗಿದೆ.

*

## ಶ್ರೀ ಸಿದ್ಧಲಿಂಗೇಶ್ವರ ವಚನ

ಪರುಷದ ಗಿರಿಯಲ್ಲಿ ಚಿಂತಾಮಣಿಯ ರತ್ನವ ಕಂಡೆನಯ್ಯಾ
ಅದು ಅನಂತಕೋಟಿ ಸೋಮ ಸೂರ್ಯರ ಬೆಳಗು ನೋಡಾ !
ಅತಿಶಯದ ಬೆಳಗಿನ ಬೆಳಗಿನೊಳು
ಆನಂದ ಸುಖಿದೊಳಗೋಲಾಡುತಿರ್ದೆನಯ್ಯಾ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ.

ಸಕಲ ಕರಣಗಳ ನಿವೃತ್ತಿ ಗಾಶ್ರಯುವಾಗೊಪ್ಪಲ್ಪಟ್ಟ ಭ್ರೂಮಧ್ಯವೆಂಬದ್ರಿಯಲ್ಲಿ ಬೇಡಿದವರಿಗೆ ವರವನೀವಲ್ಲಿ ಸುರರತ್ನ ಸ್ವರೂಪವಾದ ಮಹಾಲಿಂಗವನು ಜ್ಞಾನದೃಕ್ಕಿನಿಂದೆ ನಿರ್ದಶನವಾದ ಶಿವಶರಣ. ಆ ಮಹಾಲಿಂಗವು ಬಹಳ ಕೋಟಿ ಚಂದ್ರಾದಿತ್ಯರ ಪ್ರಭೆಯನುಳ್ಳದ್ದು. ಆ ಮಹಾಲಿಂಗದ ಚೋದ್ಯವಾದ ಜ್ಞಾನಪ್ರಕರದ ಪ್ರಭೆಯಲ್ಲಿ ಕ್ರಿಯಾನಂದದ ಪರಿಣಾಮದೊಳಗೆ ಆಂದೋಳನಂ ಗೆಯ್ಯುತಿರ್ದನಯ್ಯ

[ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನ ಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ - ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ - ಗದಗ]

### ಶ್ರೀವಾಣಿ

ಆಗಿನವರಲ್ಲಿ ರಾಷ್ಟ್ರಭಕ್ತಿ ಇತ್ತು. ರಾಷ್ಟ್ರ ಕಟ್ಟುವ ಮಹತ್ತರವಾದ ಆಕಾಂಕ್ಷೆಯಿತ್ತು. ಸ್ವಾರ್ಥವಿರಲಿಲ್ಲ. ರಾಷ್ಟ್ರ .... ರಾಷ್ಟ್ರ .... ರಾಷ್ಟ್ರ .... ಎಂದು ತುರಂಗವಾಸವನ್ನೇ ಅನುಭವಿಸಿ ಮಹಾತ್ಯಾಗವನ್ನೇ ಮಾಡಿದರು. ಸ್ವಾತಂತ್ರ್ಯತರುವ ಉದಾತ್ತವಾದ ಮಹೋತ್ತರ ಧ್ಯೇಯವಿತ್ತು. ನಾವು, ನಮ್ಮ ಕುಟುಂಬ ಅನ್ನೋ ಪ್ರಶ್ನೆಯೇ ಅವರಲ್ಲಿರಲಿಲ್ಲ. ಸ್ವಾತಂತ್ರ್ಯ ಬಂದ ಮೇಲೆ ಸ್ವಾರ್ಥ ಪ್ರವೇಶಿಸಿತು.

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ಕಾಯಕ ಸದ್ಭಾವಿ ದಾಸೋಹ ಪರಿಣಾಮಿ
ಇಷ್ಟಲಿಂಗ ಪ್ರೇಮಿ ಶಿವಭಾವಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

"ಅಳವರಿಯದೆ ನುಡಿದೆನು ಕಡೆಮುಟ್ಟೆ ನಡೆಸಯ್ಯ"
ತಿಳಿವಿನಾಕಾಶದ ಸಿರಿ ಸೂರ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

"ಲೋಕದಿಚ್ಛೆಗೆ ನುಡಿಯೆ ಲೋಕದಿಚ್ಛೆಗೆ ನಡೆಯೆ"
ಲೋಕದೊಳಗಿದ್ದು ಬೆಳಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

"ದಾಸೋಹವೆ ಪ್ರಾಣಲಿಂಗ ದಾಸೋಹವೆ ಭಾವಲಿಂಗ"
ದಾಸೋಹವೆ ಜಯಲಿಂಗ ಮಹಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವನದ ಕೋಗಿಲೆಯಾಗಿ ಮಲೆಯ ಶಿವಗಜವಾಗಿ
ಸಂಗನ ಬಸವನ ಸಿರಿಯಾಗಿ । ಬಂದಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

"ಉಣ್ಣೆ ಕೆಚ್ಚಲೊಳಿದ್ದು ಉಣಲರಿಯದು ಹಾಲನು"
ನಿಮ್ಮ ಚರಣದೊಳಿದ್ದು ಉಣಲರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ವೇದ ವೇದಾಂತವ' ಇಷ್ಟಲಿಂಗಕೆ ಮುಡಿಸಿ
ನಾದ ಬಿಂದು ಕಳೆಯ ತೋರಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಸಂಗಿಯಲ್ಲ ನೀನು ನಿಸ್ಸಂಗಿಯಲ್ಲವು'
ಇದ್ದು ಇಲ್ಲದ ಲೀಲೆ ತೋರಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಗುರುಪಥ ಶಿವಪಥ' ಬಸವ ತಂದೆಯ ನುಡಿಯು
ದಾಸೋಹ ದಾಸೋಹ ನಿನ್ನ ನುಡಿಯು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಚನ ಶಾಸ್ತ್ರವ ತಂದ ಹಳಕಟ್ಟಿ ತಂದೆಗಳ
ವಚನ ಶೋಧನೆಗೈದ ಬಂಧುಗಳ । ನೆನೆಯುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





### ಇವರು ಅಚ್ಚರಿಯೊಳಚ್ಚರಿ

# ಜ್ಯೋತಿ ಮುಟ್ಟಿ ಜ್ಯೋತಿಯಾದರು

- ಡಾ. ಪಾಟೀಲ ಪುಟ್ಟಪ್ಪ
ಸಂಪಾದಕರು, ಪ್ರಪಂಚ, ಹುಬ್ಬಳ್ಳಿ.

ಹಿಂದಿನ ಒಂದು ನೂರು ವರ್ಷಗಳಲ್ಲಿ ದಾನ ಧರ್ಮಗಳಿಗೆ ಹೆಸರಾದ ಅನೇಕ ಜನರು ಜಗತ್ತಿನಲ್ಲಿ ಆಗಿ ಹೋಗಿದ್ದಾರೆ. ಅವರ ಸಾಧನೆ ಅದ್ಭುತವಾಗಿದೆಯೆಂದು ನಮಗೆ ಇತಿಹಾಸ ಹೇಳುತ್ತದೆ.

ಆದರೆ, ನಮಗೆ ಆ ಅದ್ಭುತ ಜನರೆಲ್ಲರೂ ಕರ್ನಾಟಕದ ಸಿದ್ಧಗಂಗಾ ಮಠದ ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಎದುರಿನಲ್ಲಿ ಅಮುಖ್ಯರೆನಿಸುತ್ತಾರೆ. ಈ ಸ್ವಾಮೀಜಿಯವರ ಅಂತಃಕರಣದಲ್ಲಿ ಮಾನವ ಪ್ರೇಮದ ಹಾಲು ತುಂಬಿಕೊಂಡಿದೆ. ಕೊಟ್ಟಷ್ಟೂ ಅವರಲ್ಲಿ ಅದು ಇನ್ನೂ ಇದ್ದೇ ಇರುತ್ತದೆ.

ಸಾಮಾನ್ಯ ಕುಟುಂಬದಲ್ಲಿ ಬೆಳೆದ ಈ ಸ್ವಾಮಿಗಳು, ಜ್ಯೋತಿ ಮುಟ್ಟಿ ಜ್ಯೋತಿ ಆದಂತೆ ಸಿದ್ಧಗಂಗಾ ಮಠದ ಉದ್ದಾನ ಸ್ವಾಮಿಗಳ ಅನುಗ್ರಹದಿಂದ ತೊಳಗುತ್ತ, ಬೆಳಗುತ್ತ ಶ್ರೇಷ್ಠತೆಯನ್ನು ತಂದುಕೊಂಡು ಬೆಳೆದಿದ್ದಾರೆ.

ಶ್ರೀ ಸಿದ್ಧಗಂಗಾ ಮಠದಲ್ಲಿ ಅಡುಗೆ ಮನೆಯ ಬೆಂಕಿ ಎಂದೂ ಆರುವುದಿಲ್ಲ. ಅನ್ನ ಅರಿವೆಗಳಿಗೆ ಅವರು ಬಹುದೊಡ್ಡ ಆಶ್ರಯ ಸ್ಥಾನವನ್ನು ಒದಗಿಸಿದ್ದಾರೆ. ಅವರಿಗೆ ಜನರು ಕಾಣುತ್ತಾರಲ್ಲದೆ, ಅವರ ಜಾತಿ ಕಾಣುವುದಿಲ್ಲ. ಬಗೆ ಬಗೆಯ ಸಮಾಜಗಳಿಗೆ ಸೇರಿದ, ಅವಕಾಶಹೀನರಾದ ಬಡ ವಿದ್ಯಾರ್ಥಿಗಳಿಗೆ ಅನ್ನವನ್ನು ನೀಡಿ, ಅವರಿಗೋಸುಗ ಜ್ಞಾನದ ಬಾಗಿಲುಗಳನ್ನು ತೆರೆದಿರಿಸಿದ್ದಾರೆ.

ಹಿಂದಿನ ಏಳೆಂಟು ದಶಕಗಳಲ್ಲಿ ಸಹಸ್ರಾವಧಿ ವಿದ್ಯಾರ್ಥಿಗಳು ಅಲ್ಲಿ ತಮ್ಮ ಓದನ್ನು ಆರಂಭಿಸಿ, ಇಂದು ಅವರು ಜಗತ್ತಿನ ಆರೂ ಖಂಡಗಳಲ್ಲಿ ಹಬ್ಬಿಕೊಂಡಿದ್ದಾರೆ.

ಕರ್ನಾಟಕದಲ್ಲಿ ೨೭ ಜಿಲ್ಲೆಗಳಿವೆ. ಆ ಜಿಲ್ಲೆಗಳ ಪ್ರಾತಿನಿಧಿಕ ಸಂಸ್ಥೆಗಳು ಎರಡೇ ಎರಡು: ಒಂದು ಸರಕಾರ, ಇನ್ನೊಂದು ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳ ಶ್ರೀಮಠ. ೨೭ ಜಿಲ್ಲೆಗಳ ಜನರನ್ನು ಒಂದೇ ಸ್ಥಳದಲ್ಲಿ ಏಕಕಾಲಕ್ಕೆ ಕಾಣಬೇಕೆನ್ನುವವರು ಸಿದ್ಧಗಂಗಾ ಮಠಕ್ಕೆ ಹೋಗಬೇಕು.

ಓದಬೇಕೆನ್ನುವವರಿಗೆ ಅವರ ಬಡತನದ ಸ್ಥಿತಿ ಅಡ್ಡಿ ಬರುವುದಿಲ್ಲ. ಶ್ರೀ ಶಿವಕುಮಾರ ಸ್ವಾಮಿಗಳ ಅಕ್ಷಯ ಪಾತ್ರೆ ಇರುವಾಗ ಅವರಿಗೆ ಅನ್ನದ ಯಾವ ಕೊರತೆಯೂ ಇಲ್ಲ. ಅನ್ನವನ್ನು ನೀಡುತ್ತ ಆ ವಿದ್ಯಾರ್ಥಿಗಳಿಗೆ ಅವರು ಜ್ಞಾನದ ಬಾಗಿಲನ್ನು ತೆರೆದು ಸಜ್ಜೀವನವನ್ನು ಬದುಕುವ ದಾರಿಯನ್ನೂ ತೋರಿಸಿ ಕೊಟ್ಟಿದ್ದಾರೆ.

ಪೂಜ್ಯರಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಕರ್ನಾಟಕಕ್ಕೆ, ಭಾರತಕ್ಕೆ ದೇವರು ಕೊಟ್ಟ ಬಹುದೊಡ್ಡ ವರದಾನ. ಜಗತ್ತಿಗೆ ಹಾಗೂ ಜಗತ್ತಿನ ಜನರಿಗೆ ಒಳ್ಳೆಯದನ್ನು ಮಾಡಬೇಕೆನ್ನುವವರಿಗೆಲ್ಲ ಅವರು ಸಾಕ್ಷಿ ಪ್ರಜ್ಞೆಯೆನಿಸಿ, ನಮ್ಮ ಮಧ್ಯದಲ್ಲಿದ್ದಾರೆ. ಅಂತಹ ಪುಣ್ಯಾತ್ಮರ ಕಾಲದಲ್ಲಿ ನಾವು ಇದ್ದೇವೆ ಎನ್ನುವುದೇ ನಮಗೆ ದೊಡ್ಡ ಬಹುಮಾನ. ಸದಾ ಶಿಷ್ಟವಾದುದನ್ನು ಮಾಡುವ ಅವರ ಬಳಿಯಲ್ಲಿ ಅನಿಷ್ಟ ಯಾವುದೂ ಸುಳಿಯಲಾರದು. ಅವರ ಜೀವನವೇ ಒಂದು ಅದ್ಭುತ ಪವಾಡದಂತೆ ಇದೆ. ನೂರನೆಯ ವರ್ಷದಲ್ಲಿ ಕಾಲಿರಿಸಿದ ಅವರ ದಿನಚರಿಯನ್ನು ನೋಡಿದರೆ ನಾವು ಮೂಕ ವಿಸ್ಮಿತರಾಗುತ್ತೇವೆ. ಅವರಲ್ಲಿ ಎಲ್ಲ ಸಾಮರ್ಥ್ಯಗಳೂ ಜೀವಂತವಾಗಿ ಉಳಿದುಕೊಂಡಿವೆ.

ಪ್ರತಿದಿನ ಬೆಳಿಗ್ಗೆ ಎರಡು ಗಂಟೆಗೆ ಆರಂಭವಾಗುವ ಅವರ ದಿನಚರಿ ರಾತ್ರಿ ೧೧ ಗಂಟೆಗೆ ಮುಗಿಯುತ್ತದೆ. ಅವರು ಯಾವಾಗ ಮಲಗುವರೋ, ಯಾವಾಗ ಏಳುವರೋ ಎಲ್ಲರಿಗೂ ಅಚ್ಚರಿ, ಜಾಗೃತಿ, ಸ್ವಪ್ನ ಸುಷುಪ್ತಿ ಎಲ್ಲವೂ ಅವರಿಗೆ ಒಂದೇ. ಅವರಂತಹ ಪ್ರಜ್ಞಾಪೂರ್ಣ ಎನಿಸುವ ಪರಿಪೂರ್ಣ ಜೀವನವನ್ನು ಬದುಕಿರುವ ಜನರು ನಮಗೆ ಸಿಕ್ಕುವುದಿಲ್ಲ. ಬೆಳಗಿನ ಎರಡು ಗಂಟೆಗೆ ಆರಂಭವಾಗುವ ಅವರ ಜೀವನವು ಸೂರ್ಯನೇಮಿ ಕ್ರಮವೆಂಬಂತೆ ರಾತ್ರಿ ೧೧ ಗಂಟೆಯವರೆಗೆ ಕಾರ್ಯಶೀಲವಾಗಿರುತ್ತದೆ.

ಗುರುಪೀಠಕ್ಕೆ ಬಂದ ಹಿಂದಿನ ೮೦ ವರ್ಷಗಳಿಂದಲೂ ಅವರ ಕಾಯಕ ನಿಷ್ಠ ಜೀವನವು ಇದೇ ಕ್ರಮವನ್ನು ಅನುಸರಿಸಿಕೊಂಡು ಬಂದಿದೆ. ಶ್ರೀ ಸಿದ್ಧಗಂಗಾ ಮಠಕ್ಕೆ ಬೇರೆ ಯಾವ ಆಸ್ತಿಯೂ ಇಲ್ಲ. ಅವರೇ ಅದರ ಕಾಮಧೇನು, ಅದರ ಕಲ್ಪವೃಕ್ಷ. ಅವರ ಜೋಳಿಗೆ ಎಂದೂ ಬರಿದಾಗಿರುವುದೇ ಇಲ್ಲ. ಅದು ಸದಾ ತುಂಬಿರುತ್ತದೆ.

ಶ್ರೀ ಬಸವೇಶ್ವರರ ಮಾತೊಂದು ಇದೆ. **"ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕೆ ಅಳಿವಿಲ್ಲ"**. ಶ್ರೀ ಶಿವಕುಮಾರ ಸ್ವಾಮಿಗಳೆಂಬ ಈ ಜಂಗಮ ಸದಾ ಸಂಚರಿಸುತ್ತಲೇ ಇರುತ್ತದೆ. ಅವರು ನಡೆದ ದಾರಿ ಸವೆದಿದೆ. ಅವರು ಮಾತ್ರ ಸವೆದಿಲ್ಲ. ತಮ್ಮ ಜೀವನದ ನೂರು ಸಂವತ್ಸರಗಳನ್ನೂ ಅರ್ಥಪೂರ್ಣವಾಗಿ ಬದುಕಿರುವ ಅಂಥವರು ನಮಗೆ ಇನ್ನೊಬ್ಬರು ಸಿಕ್ಕುವುದಿಲ್ಲ. ದೊಡ್ಡ ಕಾರ್ಯಗಳನ್ನು ಮಾಡಿದವರು, ಮಾಡುತ್ತಿರುವವರು ಅಲ್ಲಲ್ಲಿ ಇನ್ನೂ ಇದ್ದೇ ಇದ್ದಾರೆ. ಆದರೆ ಅವರು ಯಾರೂ ಎವರೆಸ್ಟ್ ಬೆಟ್ಟದ ಶಿಖರದಂತಿರುವ ಡಾ. ಶಿವಕುಮಾರ ಸ್ವಾಮಿಗಳು ಸಾಧಿಸಿದ ಸಿದ್ಧಿಗೆ ಸರಿಗಟ್ಟಲಾರರು.

ಅವರು ನಡೆಸಿಕೊಂಡು ಬರುತ್ತಿರುವ ಉಚಿತ ಪ್ರಸಾದ ನಿಲಯವೆಂಬ ಸಂಸ್ಥೆಗೆ ಸರಿ ದೊರೆ ಆಗಬಲ್ಲ ಇನ್ನೊಂದು ಸಂಸ್ಥೆ ಬೇರೆ ಎಲ್ಲಿಯೂ ಇಲ್ಲ. ವಾತ್ಸಲ್ಯಮಯಿ ತಾಯಿಯಂತೆ ಅವರು ತಮ್ಮ ಆಶ್ರಮಕ್ಕೆ ಬಂದ ವಿದ್ಯಾರ್ಥಿಗಳನ್ನೆಲ್ಲ ಕರುಣೆಯಿಂದ ಕಾಣುತ್ತಾರೆ. ಓದುವ ವಿದ್ಯಾರ್ಥಿಗಳನ್ನೆಲ್ಲ ತಮ್ಮ ಅಂತಃಕರಣದಲ್ಲಿ ಇರಿಸಿಕೊಂಡಿರುವ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಂತಹ ಆದರ್ಶ ವ್ಯಕ್ತಿಯನ್ನು ನಾವು ಎಲ್ಲಿಯೂ ಕಾಣುವುದಿಲ್ಲ. ಅವರನ್ನು ಕಂಡರೆ ನಾವು ಸಿದ್ಧಗಂಗಾ ಮಠದಲ್ಲಿಯೇ ಕಾಣಬೇಕು.

ಪವಾಡವೆನಿಸುವ ಕಾರ್ಯವನ್ನು ಅವರು ಹಲವಾರು ದಶಕಗಳಿಂದಲೂ ಮಾಡುತ್ತ ಬಂದಿದ್ದಾರೆ. ಅವರ ಬಳಿಗೆ ಯಾರೇ ಹೋಗಲಿ, ಅವರಿಗೆ ಹೇಳುವ ಒಂದು ಸಾಂತ್ವನದ ಮಾತು ಅವರಲ್ಲಿ ಇದ್ದೇ ಇರುತ್ತದೆ. ಅವರನ್ನು ಕಂಡವರೆಲ್ಲರೂ ಹರ್ಷಚಿತ್ತರಾಗಿ ಹಿಂದಿರುಗಿ ಬರುತ್ತಾರೆ.

ಅವರು ಯಾರ ಬಳಿಗೂ ಹೋಗುವುದಿಲ್ಲ, ಎಲ್ಲರೂ ಅವರನ್ನು ಹುಡುಕಿಕೊಂಡು ಅವರ ಬಳಿಗೇ ಬರುತ್ತಾರೆ. ದೇಶದ ಪ್ರಧಾನಮಂತ್ರಿ ಹಾಗೂ ರಾಷ್ಟ್ರಪತಿಯನ್ನು ಜನರು ಹುಡುಕಿಕೊಂಡು ಹೋಗುತ್ತಾರೆ. ಆದರೆ, ಮುಖ್ಯಮಂತ್ರಿ, ಗವರ್ನರ್, ಪ್ರಧಾನಮಂತ್ರಿ ಹಾಗೂ ರಾಷ್ಟ್ರಪತಿ ಎಲ್ಲರೂ ಅವರನ್ನೇ ಹುಡುಕಿಕೊಂಡು ಬರುತ್ತಾರೆ. ಇಂತಹ ಭಾಗ್ಯಕ್ಕೆ ಪಾತ್ರರಾದ ಪುಣ್ಯಪುರುಷರು ಇನ್ನೊಬ್ಬರಿಲ್ಲ. ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು **'ಕರ್ನಾಟಕ ರತ್ನ'**ವೆನ್ನುವುದು ದೊಡ್ಡ ಸಂಗತಿಯೇನೂ ಅಲ್ಲ. ಅವರು **ಭಾರತ ರತ್ನ** ಆದವರಿಗಿಂತಲೂ ಬಹಳಷ್ಟು ದೊಡ್ಡವರು. ಅವರಂತಹ ದೊಡ್ಡವರು ಜಗತ್ತಿನಲ್ಲಿ ನಮಗೆ ಎಲ್ಲಿ ಸಿಗುತ್ತಾರೆ ?

*(ಕೃಪೆ : ಕನ್ನಡಪ್ರಭ)*



ಸರ್ವಜ್ಞನೆಂಬುವನು । ಗರ್ವದಿಂದಾದವನೆ?
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ ।
ಪರ್ವತವೆ ಆದ ಸರ್ವಜ್ಞ ।

ಎಲ್ಲ ಬಲ್ಲವರಿಲ್ಲ । ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು ಬಲವಿಲ್ಲ ಸಾಹಿತ್ಯ ।
ವೆಲ್ಲವರಿಗಿಲ್ಲ ಸರ್ವಜ್ಞ ।

ಹಿರಿಯ ನಾನೆನಬೇಡ । ಗುರುವ ನಿಂದಿಸಬೇಡ ।
ಬರೆವರ ಕೂಡ ಹಗೆಬೇಡ, ಬಂಗಾರ ।
ದೆರವು ಬೇಡೆಂದ ಸರ್ವಜ್ಞ ।





## Address at the 100th Birthday Celebrations of His Holiness Sree Sree Sivakumara Swamiji Tumkur

08-04-2007 : Bangalore

### The Great Sage of Sree Siddaganga Math

"Great souls bless the nation"




I am delighted to be in this divine environment and participate in the 100th birthday celebrations of His Holiness Sree Sree Shivakumara Swamiji, the sage of Sree Siddaganga Math. Let all the divine blessings descend on Swamiji. My respects to Their Holiness Shivarathri Desikendra Maha Swamiji, Balagandadharanatha Maha Swamiji and greetings to all the participants in this function. Today is a very important day. I am seeing in our country, a great sage, who has been performing "Tapas" for the last 77 years. Through the intense Tapas, he has freed himself from passion, anger, love and hate. Presence of such great souls in the country, spreads peace and promotes spiritual prosperity. He is a beacon light that attracts and spreads the spiritual message to the people and society.

### God's creation

When I was thinking what thoughts that I can share with this important spiritual gathering and the students, I am reminded of Rumi's work which aptly suits the context of the educational environment. Rumi says,

***"Angel is free because of his knowledge,***
***The beast because of his ignorance,***
***Between the two remains the son of man to struggle"***

It is said that, Almighty the God wanted to create a best of creation. He worked for millions of years, designed and evoloved the image. He went on looking at the image, improved and improved and finally deceided to give life. He looked at the galaxies, the oceans and looked at his own creation – the man. As soon as the man got life, two things happened. First, he opened his eyes and smiled. God was happy. His creation starts with a smiling. The Second, he opened his mouth and said, "Almigthy, thank you". The God was very happy. Two good beginnings from first creation. He was so delighted to see his creation and felt that his creation did the two right things. Suddenly, he found that something is missing in the man. He then created fire in flash of a second, out of which came the Saithan. God told the Saithan to prostrate before his best creation – the man and give respects. Saithan said, "Oh God, you took millions of years to create the man. But you

created me out of fire in a flash of a second. So, I am the best." The almighty who had created the universe with mighty orbiting galaxies with orbiting stars and planets, first time, bewildered with the response of Saithan. He has created the best of his creation, the man on one side, and the another side, the Saithan, the worst of His Creation. He thought of it and looked at both with benevolence.

## God's Mission

The Almighty integrated the man and Saithan. God said that Oh ! Humanity, I am giving you a mission" and He gave the following message :

"I have created the human being with brain and thinking faculty. I command all My creations that use your faculty with reasoning to reach My image".

This is the mission of the human life. Science is the best boon, God has bestowed upon mankind.

Science with reasoning becomes the capital of the society. In whatever field we work, be it science, technologly, medicine, politics, policing, theology, religion or judiciary, we have to remain in the service of the people whose well being is central to all human knowledge and endeavour. His Holiness Sree Sree Sivakumara Swamiji is an example of spreading the message of "giving". He has been on a tireless mission of socio-economic development and eradication of evils of illteracy and discrimination through giving. He saw education and alleviation of hunger among the masses as an effective means to enrich human capacity which in turn would contribute to national reconstruction. His Holiness Swamiji has followed the footprints of his Guru of providing free boarding home to the students which is now serving the needs of over 8,000 students. In addition 2000 pilgrims and visitors in the Math are also provided food every day. During the last seven decades Swamiji is the founder of well over hundred and twenty five educational institutions ranging from nursery to institutions of technology, pure science, arts, management, vocational training and performing arts.

## Purpose of human life

The purpose of human life is beautifully described in "Bhagawat Gita". In the battle scence, where Arjuna was hesitating to fight against his own kith and kin in Kurushetra. Lord Krishna showed Arjuna a vision of Vrindavan where the whole garden was blossoming with beautiful flowers and fragrance and the flowers attracting honeybee. It was an enchanting scence. In another vision of the garden all the flowers which blossomed in the morning had now fallen on the ground. Lord Krishna says to Arjuna, "See the flower, how generously it distributes perfume and honey. It gives to all, gives freely its essence. When its work is done, it falls away quietly. Try to be like the flower, unassuming despite all its qualities". Lord Krishna conveys this message to the humanity. This characteristics is nicely portrayed by all actions of Swamiji.





## Human indomitable spirit

Imam Ghazali was a saint teacher, who lived in the 12th Centruy. My father narrated me a scene when Imam Ghazali has been tested by Saitan, the transgressed Angel. One day Imam Ghazali was unfolding his prayer mat for Maharif Namaz. At that time, the Saitan appeared in front of him and said, "Respected Imam Sahib, I am just now coming from heaven where there was a discussion about great human beings and you have been judged as the best human being living on Earth. As a recognition of your great stature you have been exempted from the trouble of performing Namaz in future. Imam Ghazali was restless as the Namaz time was approaching. So he looked at Shaitan and said, "Saitan Sahib, first of all performing Namaz is not a trouble at all when even Prophet Mohammed (peace be upon him), was not exempted from performing Namaz five times a day, how can a poor Imam like me be exempted? Thank you. He went on to perform the Namaz. When he completed the Namaz, Imam Ghazali still saw Saitan was standing. Imam Sahib asked him what he was waiting for. Saitan said, "O Imam you have excelled even the most favoured Prophet Adam, who could not win over my deception and I made him to eat the forbidden fruit. Realizing that Saitan was flattering Imam Sahib prayed to Allah, Oh almightly, help me and save me from the deception of the flattery making a disappointed Saitan finally disapperar. His mission failed. But one of the great human being succeeded. Friends, what is the message? When you are studying in the Siddaganga Math institutions, no Saitan and no devil in all your lifetime should deceive you with flattery. You will certainly defeat the Saitan and succeed in your missions in life. Now, I would like to emphasize the importance of helping the needy.

## The story of the Lost Sheep

Dear Friends, when I am talking to you, I am reminded of the Biblical story of the "Lost sheep", as said by The Jesus Christ. "If anyone of you has a hundred sheep and one of them gets lost, what will you do? Won't you leave the ninety nine in the field and go and look for the lost sheep until you find it, and when you find it, you will be so glad that you will put it on your shoulder and carry it home. Then you will call in your friends and neighbours and say, let us have a feast, I have found my lost sheep."

As the Lost Sheep is the most important for the Shepherd, the message for every one of us from this story is that you may find around you a house which is not lit. Please help to light that house. Similarly, teachers in the class room may find hundreds of bright students but a few may need knowledge with kindness. All teachers must locate such students and impart the knowledge. Leaders of my nation, you may meet many people and help them, but you immediately look for those who need your utmost help and bring them to the mainstream. Those who deal with public administration, look for the last person to be serviced and make him or her feel that he or she is servided with the kind heart. Similarly, judiciary and law enforcement agencies should look for the marginalized persons, who cannot even reach you because of the multiple gates and layers between the judiciary and the citizen. Media as partner in national development should celebrate the success of our people whether it is in fishing, farming, craftsmanship or achievement of a rural area. The

micro world of rural realities lives in the macro reality of a globally acclamied India. Media has to capture this.

There are many such examples, which can be cited. Dear friends, if all of us do this, God will be with us and I am sure the whole nation will be happy, prosperous and safe. This is fully corroborated by the advice given to mahatma Gandhi by his mother. Gandhiji says, "My mother had given an advice "Son, in your entire life time if you can save or better someone's life, your birth as a human being and your life is a success. You have the blessing of the Almighty God".

## Conclusion

The radiating message from Sree Siddaganga Math

You, in front of you, see a sage,
Wearing beautiful spiritual blessings, the sage,
Everyday, Almighty has given this sage,
A precious diamond of life.
The sage, strung over thirty six thousand,
Diamonds into a priceless garland of Tapasvi life,
With the message to humanity :
"O my fellow citizens,
In giving, you receive happiness,
In Body and Soul.
You have everything to give
If you have knowledge, share it.
If you have resources, share it with the needy.
Use your mind and heart,
To remove the pain of the suffering,
And, cheer the sad hearts.
In giving, you received happiness.
Almighty will bless all your actions."

(The poem was translated into Kannada by writer Shri Go.ru. Channabasappa, music composed by Shri Narasimhalu Vadivatti and rendered by Ms. Kasturi Shankar)

With these words Inaugurate the 100th birthday celebrations of our respected Guruji His Holiness Sree Sree Sivakumara Swamiji. My best wishes for success in all your missions.

May God bless you.

**Dr. A.P.J. Abdul Kalam**
www.presidentofindia.nic.in



 ನುಡಿ ನಮನ 

### ಚಕಿತಗೊಳಿಸುವ ಚಿಂತನೆಯ ಹಾದಿ

# ಸೋಹಂ ದಾಸೋಹಂ

**- ಡಾ. ಎಂ. ಚಿದಾನಂದಮೂರ್ತಿ**
ಖ್ಯಾತ ಸಂಶೋಧಕರು, ಬೆಂಗಳೂರು.

**ಕ**ರ್ನಾಟಕದ ಇಂದಿನ ಸುಪ್ರಸಿದ್ಧ ಪೀಠಾಧ್ಯಕ್ಷರಲ್ಲಿ ಅತ್ಯಂತ ಹಿರಿಯರಾದ ಸಿದ್ಧಗಂಗಾ ಕ್ಷೇತ್ರದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರನ್ನು ನಾನು ಹತ್ತಿರದಿಂದ ಬಲ್ಲೆ ಎಂದು ಹೇಳಿಕೊಳ್ಳುವುದರಲ್ಲಿ ನನಗೊಂದು ಸಕಾರಣ ಹೆಮ್ಮೆ ಇದೆ. ಅವರು ಮಾಡುತ್ತಿರುವ ಕಾರ್ಯಗಳು, ಅವರ ಚಿಂತನೆಯ ಹಾದಿ ಇವು ನನ್ನನ್ನು ಚಕಿತಗೊಳಿಸಿವೆ. ಉತ್ಪ್ರೇಕ್ಷೆಯಿಲ್ಲದೆ ಹೇಳುತ್ತೇನೆ. ಇಂದಿನ ವೀರಶೈವ ಪೀಠಾಧ್ಯಕ್ಷರಲ್ಲಿ ಅವರು ವಯಸ್ಸಿನಲ್ಲಿ ಮಾತ್ರವಲ್ಲದೆ ಪ್ರಬುದ್ಧತೆಯಲ್ಲೂ ಅವರನ್ನು ಸರಿಗಟ್ಟುವವರು, ಅವರ ಸಮೀಪದಲ್ಲೂ ನಿಲ್ಲಬಲ್ಲವರು ಕಡಿಮೆ ಮಾತ್ರವಲ್ಲ ! ಯಾರೂ ನನಗೆ ಕಾಣಿಸುತ್ತಿಲ್ಲ. ವೀರಶೈವರು ಹಿಂದೂಗಳು ಹೌದೇ ಅಲ್ಲವೇ ಎಂಬ ವಿಷಯವೇ ಆಗಲಿ, ವೀರಶೈವರೇ ಬೇರೆ ಲಿಂಗಾಯತರೇ ಬೇರೆ ಎಂಬ ವಿಷಯವೇ ಆಗಲಿ; ಅಂತಹ ಸಮಯಗಳಲ್ಲಿ ಅವರು ದಿಟ್ಟವಾಗಿ ನ್ಯಾಯದ ಪರ ನಿಂತಿದ್ದಾರೆ. ಆ ಅಪ್ರಬುದ್ಧ ನಿಲುವುಗಳು ವೀರಶೈವ (ಲಿಂಗಾಯತ) ಸಮೂಹವನ್ನು ಒಡೆದು ನಿರೀಕ್ಷಿತ ಅನಾಹುತವನ್ನು ಮಾಡುತ್ತಿವೆ. *"ವೀರಶೈವ ಧರ್ಮ ಹಿಂದೂ ಧರ್ಮದ, ಅರ್ಥಾತ್ ಶೈವ ಧರ್ಮದ ಒಂದು ಶಾಖೆ - ದ್ವೈತ, ವಿಶಿಷ್ಟಾದ್ವೈತ ಪಂಥಗಳಿದ್ದಂತೆ"* ಎಂದು ಅವರು ಘೋಷಿಸಿದ್ದಾರೆ. ಹಾಗೆಯೇ ವೀರಶೈವ, ಲಿಂಗಾಯತ ಎಂಬುವು ವೃಕ್ಷ, ಮರಗಳಂತೆ ವಿಭಿನ್ನ ಭಿನ್ನ ಪದಗಳಾದರೂ ಅವರು ಸೂಚಿಸುವ ಪರಿಕಲ್ಪನೆ ಒಂದೇ. ಅವರು ಪರಂಪರೆಯಂತೆಯೇ ಆಧುನಿಕ ಜಗತ್ತಿನ ಆಗು ಹೋಗುಗಳನ್ನೂ ಗ್ರಹಿಸಿ ಸೂಕ್ಷ್ಮವಾಗಿ ಸ್ಪಂದಿಸುತ್ತಾರೆ. ಅವರಲ್ಲಿ ಕೀರ್ತಿ, ಮೋಹ, ಅಸಹನೆ, ಸ್ವಪ್ರತಿಷ್ಠೆ, ಸ್ವಾರ್ಥ ಇವುಗಳಿಗೆ ಅವಕಾಶವೇ ಇಲ್ಲ. ವೀರಶೈವ ಅಥವಾ ಲಿಂಗಾಯತ ಸಮಾಜದಂತೆಯೇ ಭಾರತೀಯ ಸಮಾಜವು ಮಾನವ ಸಮಾಜವೂ ಅಷ್ಟೇ ಅವರಿಗೆ ಮುಖ್ಯ.

ಈ ಮಾತುಗಳನ್ನು ಹೇಳುವಾಗ ನನ್ನ ಮನಸ್ಸಿನಲ್ಲಿ ಅಪ್ರಬುದ್ಧರಾದ ಕೆಲವು ಗಣ್ಯರಿದ್ದಾರೆ - ಅವರಿಗಾಗಲೇ ಉತ್ತರ ಕರ್ನಾಟಕದಲ್ಲಿ ಭೇದದ ಬೆಂಕಿ ಹಚ್ಚಿರುವುದು ಧಗ ಧಗ ಉರಿಯುತ್ತ ಹಬ್ಬುತ್ತಿದೆ. ಆ ಬೆಂಕಿಗೆ ಗಣ್ಯರ ದೇಹಗಳಲ್ಲ, ಅವರ ಕೀರ್ತಿ, ಪ್ರತಿಷ್ಠೆಗಳು ಸಿಕ್ಕು ಮುಂದೆ ಬೂದಿಯಾದರೂ ಆಶ್ಚರ್ಯವಿಲ್ಲ. ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಸತ್ಯ, ನ್ಯಾಯಗಳ ಪರವಾಗಿ ನಿಲ್ಲಲು ನನ್ನಂಥವರಿಗೆ ಸ್ಫೂರ್ತಿ ಬೆಂಬಲವಾಗಿ ನಿಂತಿದ್ದಾರೆ. ಅವರು ಹೇಗೆ ದಯಾಪರರೋ ಅನ್ಯಾಯಗಳ ವಿರುದ್ಧ ಅಷ್ಟೇ ಕಠೋರವಾಗಿಯೂ ಇರಬಲ್ಲವರು. ಅಂತರ್ವೀಕ್ಷಣೆಯ ಶುಭ್ರಚಾರಿತ್ರ್ಯದ ಅವರು ವೀರಶೈವ ಹಾಗೂ ಹಿಂದೂ ಧರ್ಮಗಳ ಮೂಲ ಉದಾತ್ತ ಧ್ಯೇಯಗಳ ಒಂದು ಸಂಕೇತ. ಇದು ಬರೀ ಪ್ರಶಂಸೆ ಅಲ್ಲ, ಒಂದು ವಾಸ್ತವ.

ಎರಡು ವರ್ಷಗಳ ಹಿಂದೆ ಅವರು ಸಿದ್ಧಗಂಗೆಯ ಶ್ರೀಕ್ಷೇತ್ರದ ಅತಿಥಿ ಗೃಹದಲ್ಲಿ ನನಗೆ ಒಂದು ವಾರ ಇದ್ದು **"ಭಾಷಿಕ ಬೃಹತ್ ಕರ್ನಾಟಕ"** ಎಂಬ ಕೃತಿ ರಚನೆಗೆ ಅನುವು ಮಾಡಿಕೊಟ್ಟರು. ಬೆಂಗಳೂರಿನಲ್ಲಿ ನನಗೆ ಆ ಕೃತಿ ರಚನೆಯ ಟಿಪ್ಪಣಿಗಳೂ ಸಿದ್ಧವಾದರೂ ಕೃತಿ ರಚನೆಗೆ ಇಲ್ಲಿ ಬಿಡುವು ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಬೆಳಗಿನಿಂದ ರಾತ್ರಿವರೆಗೆ ಸಿದ್ಧಗಂಗೆಯ ಪ್ರಶಾಂತ ವಾತಾವರಣದಲ್ಲಿ ನನ್ನ ಬರವಣಿಗೆ ಆರಂಭವಾಗಿ ಒಂದು ಹಂತವನ್ನೂ ತಲುಪಿತು. ಅಲ್ಲಿಯವರೆಗೆ ಹೊರಗಿನಿಂದ ಮಾತ್ರ ಅಲ್ಲಿನ ವಿದ್ಯಾರ್ಥಿ ನಿಲಯವನ್ನು ಕಂಡಿದ್ದೇನೇ ಹೊರತು ಒಳ ಆತ್ಮೀಯ ಪರಿಚಯವಾಗಿರಲಿಲ್ಲ. ನಾನೂ ಎಂಟು ವರ್ಷ ದಾವಣಗೆರೆಯ ಉಚಿತ ವಿದ್ಯಾರ್ಥಿನಿಲಯದಲ್ಲಿದ್ದು ಓದಿದವನು. ಈ ಬಾರಿ ಅಲ್ಲಿನ ವಿದ್ಯಾರ್ಥಿಗಳ ಜೊತೆ ಸಂಪೂರ್ಣ ಬೆರೆತು ನಾನು ಪಡೆದ ಅನುಭವವೆಂದರೆ, ಸಿದ್ಧಗಂಗಾ ಕ್ಷೇತ್ರ ಒಂದು ಸಂಕ್ಷಿಪ್ತ ಕರ್ನಾಟಕ. ಕರ್ನಾಟಕದ ಎಲ್ಲೆಡೆಗಳಿಂದ, ವಿಶೇಷವಾಗಿ ಉತ್ತರ ಕರ್ನಾಟಕದಿಂದ ಬಡ ವರ್ಗದ ಮಕ್ಕಳು ಅಲ್ಲಿದ್ದು ಉಚಿತ ಊಟ ವಸತಿ ಸೌಕರ್ಯ ಪಡೆದು ಓದನ್ನು ಮುಂದುವರಿಸುತ್ತಿದ್ದಾರೆ. ಅವರ ಹಿನ್ನೆಲೆ ಒಂದು ಕಣ್ಣೀರಿನ ಕತೆ. ಅವರ ಕಣ್ಣೀರನ್ನು ಒರೆಸಿ ಅವರ

ಬದುಕಿಗೆ ದಾರಿ ದೀಪವಾಗಿರುವ ಶ್ರೀಮಠ, ಅದರ ಪ್ರಾಣ ಜೀವಾಳ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ. ಇವರ ಕೊಡುಗೆ ಏನೆಂಬುದರ ಪ್ರತ್ಯಕ್ಷ ಅರಿವಾಯ್ತು. ಹನ್ನೆರಡನೆಯ ಶತಮಾನದ ಶರಣರ 'ದಾಸೋಹ' ಪರಿಕಲ್ಪನೆ ನೆನಪಾಯ್ತು.

"ದಾಸೋಹಂ" ಎಂದರೆ ಸಂಸ್ಕೃತದಲ್ಲಿ "ನಾನು ದಾಸ ಆಗಿದ್ದೇನೆ" ಎಂದರ್ಥ. (="ದಾಸಃಅಹಂ"). ಸಂಸ್ಕೃತದಲ್ಲಿ ಅದಕ್ಕಿಂತ ಪ್ರಸಿದ್ಧವಾದ ಉಕ್ತಿ ಎಂದರೆ, "ಸೋಹಂ" (="ಸಃಅಹಂ")-ಎಂದರೆ ನಾನೇ ಆಗಿದ್ದೇನೆ" ಎಂದರ್ಥ. "ದಾಸೋಹಂ", "ಸೋ ಹಂ" ಎಂಬುದು ಆಧ್ಯಾತ್ಮಿಕ ಕ್ಷೇತ್ರದ ಪಾರಿಭಾಷಿಕ ಪದಗಳು. "ಸೋ ಹಂ" ಎಂದರೆ ನಾನು ಅವನೇ, ಎಂದರೆ ಪರಮಾತ್ಮನೇ ಆಗಿದ್ದೇನೆ ಎಂಬ ಅನುಭವದ ಅಭಿವ್ಯಕ್ತಿ. "ದಾಸೋಹಂ" ಎಂದರೆ ನಾನು ಪರಮಾತ್ಮನ ದಾಸನೇ ಆಗಿದ್ದೇನೆ ಎಂದರ್ಥ. "ದಾಸೋಹಂ" ಮತ್ತು "ಸೋಹಂ" ಇವು ಒಬ್ಬ ಆಧ್ಯಾತ್ಮಿಕ ಸಾಧಕನ ಅನುಭವಗಳ ಬೆಳವಣಿಗೆಯ ಸೂಚಕಗಳು ಅಥವಾ ಸಂಕೇತಗಳು. ಆಧ್ಯಾತ್ಮಿಕ ಸಾಧಕನಾದವನು ಆರಂಭದಲ್ಲಿ ತಾನು ಪರಮಾತ್ಮನ ದಾಸ, ಸೇವಕ ಎಂಬ ಭಕ್ತಿ ಭಾವನೆಯಿಂದ ಪರಮಾತ್ಮನನ್ನು ಆರಾಧಿಸುತ್ತಾನೆ. (ಅಂತಹವೇ ಷಟ್ಸ್ಥಲಗಳ ಮೊದಲನೆಯ ಭಕ್ತಸ್ಥಲ). ಇಂದ್ರಿಯಗಳನ್ನು ನಿಯಂತ್ರಿಸಿ, ಪರಮಾತ್ಮನಿಗೆ ತನ್ನನ್ನು ತಾನು ಸಂಪೂರ್ಣವಾಗಿ ಒಪ್ಪಿಸಿಕೊಂಡು ಮುಂದುವರಿಯುವ ಸಾಧಕನಿಗೆ ಕ್ರಮೇಣ ತಾನು ಪರಮಾತ್ಮನ ದಾಸಸೇವಕ ಎಂಬ ಅನುಭವದಿಂದ, ಎಂದರೆ ನಾನೇ ಬೇರೆ ಭಗವಂತನೇ ಬೇರೆ ಎಂಬ ಅನುಭವದಿಂದ ಭಿನ್ನವಾದ ವಲಯದ ಅನುಭವವಾಗುತ್ತದೆ. ಕ್ರಮೇಣ, ಆ ಪರಮಾತ್ಮನು ತನ್ನ ಒಳಗೇ ಇದ್ದಾನೆ ಎಂಬ, ಕ್ರಮೇಣ ಅವನೇ ತಾನೂ ಎಂದೂ ತಾನೂ ಪರಮಾತ್ಮನೂ ಅಭಿನ್ನ ಎಂಬ ಅನುಭವವಾಗುತ್ತದೆ. (ಅದೇ ಷಟ್ಸ್ಥಲಗಳ ಕೊನೆಯ ಐಕ್ಯಸ್ಥಲ) "ದಾಸೋಹಂ" ಸ್ಥಿತಿಯು 'ಸೋಹಂ' ಸ್ಥಿತಿಗೆ ಏರುತ್ತದೆ – ದ್ವೈತ ಸ್ಥಿತಿಯಿಂದ ಆತ್ಮವು ಅದ್ವೈತ ಸ್ಥಿತಿಯನ್ನು ತಲುಪುತ್ತದೆ. ಶಂಕರಾಚಾರ್ಯರ "ಚಿದಾನಂದ ರೂಪಃ ಶಿವೋಹಂ ಶಿವೋಹಂ" ಎಂದು ಕೊನೆಯಾಗುವ ಪಾದಗಳುಳ್ಳ ಸಂಸ್ಕೃತ ಗೀತವು ಪ್ರಸಿದ್ಧ. "ಶಿವೋಹಂ" ಎಂದರೂ ಒಂದೇ, "ಸೋಹಂ" ಎಂದರೂ ಒಂದೇ. ವೀರಶೈವ ಪರಿಕಲ್ಪನೆಯಲ್ಲಿ "ದಾಸೋಹ" ಮಾತಿಗೆ ಸ್ವಲ್ಪ ಭಿನ್ನವಾದ ಅರ್ಥ ಲಭ್ಯವಾಗಿದೆ. "ಕಾಯಕ" ಎಂದರೆ ವ್ಯಕ್ತಿ ಕೈಗೊಳ್ಳುವ ಭಕ್ತಿಭಾವ ಮೂಲದ ವೃತ್ತಿ : ಆಡಳಿತ ವ್ಯವಸಾಯ, ಮೀನುಗಾರಿಕೆ, ಕ್ಷೌರ, ಚಪ್ಪಲಿ ಹೊಲಿಯುವಿಕೆ ಇತ್ಯಾದಿ ಯಾವುದೇ ವೃತ್ತಿಯನ್ನು ಜೀವನೋಪಾಯಕ್ಕಾಗಿ ಆರಿಸಿಕೊಂಡರೂ ಅವೆಲ್ಲವೂ ಶರಣರ ಪ್ರಕಾರ ತಾತ್ವಿಕವಾಗಿ ಸರಿಸಮಾನವಾದಂಥವು. ವೃತ್ತಿಗಳಲ್ಲಿ ಯಾವುದೂ ಹೆಚ್ಚಲ್ಲ, ಕಡಿಮೆ ಅಲ್ಲ: ಅದು ಕಾಯಕ ಪರಿಕಲ್ಪನೆಯ ಮುಖ್ಯ ಅಡಿಗಲ್ಲು. ವ್ಯಕ್ತಿ ತಾನು ಮಾಡುವ ಜೀವನೋಪಾಯದ ಯಾವುದೇ ವೃತ್ತಿಯನ್ನು ಶ್ರದ್ಧೆಯಿಂದ ಶ್ರಮವಹಿಸಿ ಮಾಡುತ್ತ ಆ ವೃತ್ತಿಯು ತನ್ನ ಸಾಧನೆಯ ಮಾರ್ಗ, ಭಗವಂತನತ್ತ ಸಾಗುವ ಒಂದು ಪಥ ಎಂದೇ ಭಾವಿಸಬೇಕು. ಆ ವೃತ್ತಿಯಿಂದ ಬರುವ ಆದಾಯವು ಅವನ ಮತ್ತು ಅವನ ಕುಟುಂಬದ ನಿರ್ವಹಣೆಗಾದರೂ ಆ ಆದಾಯದ ಒಂದು ಭಾಗವನ್ನು ತಾನು ಬದುಕುತ್ತಿರುವ ಸಮಾಜದ ಜನರ ಜೊತೆ ಹಂಚಿಕೊಳ್ಳಬೇಕು – ಇದು ಕಾಯಕ ಪರಿಕಲ್ಪನೆಯ ಒಂದು ಮುಖ್ಯ ಆಯಾಮ. ಹಾಗೆ ಸಂಪತ್ತನ್ನು ಹಂಚಿಕೊಳ್ಳುವ ಒಂದು ವಿಧಾನವೆಂದರೆ ಸಾಮೂಹಿಕವಾಗಿ ಸಾಮಾನ್ಯ ಬಡ ಜನರಿಗೆ ಭೋಜನದ ವ್ಯವಸ್ಥೆ ಮಾಡುವುದು. ಆ ಭೋಜನವು ಪೂಜೆ, ಜಪ, ಸ್ತೋತ್ರ, ಇವುಗಳ ಹಿನ್ನೆಲೆಯಲ್ಲಿ ನಡೆಯುತ್ತದೆ. ಅದೇ "ದಾಸೋಹ" – "ದಾಸೋಹ" ಮಾತಿಗೆ ಆದಾಯವನ್ನು ಗಳಿಸಿರುವ ವ್ಯಕ್ತಿಯೊಬ್ಬ ಶ್ರದ್ಧೆಯಿಂದ ವ್ಯವಸ್ಥೆ ಮಾಡುವ ಸಾಮೂಹಿಕ ಭೋಜನ ವ್ಯವಸ್ಥೆ ಎಂಬರ್ಥ ಬಂದಿದೆ.

ದಾಸೋಹ ಒಂದು ರೀತಿಯಲ್ಲಿ ಹಣವಂತರು ಸಾಮಾನ್ಯರಿಗೆ ವ್ಯವಸ್ಥೆ ಮಾಡುವ ಸಾಮೂಹಿಕ ಊಟವಾದರೂ ಅದು ಶ್ರೀಮಂತರು ಬಡವರಿಗೆ ನೀಡುವ "ದಾನ" ಅಲ್ಲ. ದಾಸೋಹಕ್ಕೂ ದಾನಕ್ಕೂ ಇರುವ ಮುಖ್ಯ ವ್ಯತ್ಯಾಸವನ್ನು ಗಮನಿಸಿ. "ದಾನ" ಕ್ರಿಯೆಯಲ್ಲಿ ಎರಡು ಪಾತ್ರಗಳಿವೆ: ಒಬ್ಬ ಶ್ರೀಮಂತ – ಅವನದು ನೀಡುವ ಕೈ, ಮೇಲಿರುವ ಕೈ. ಇನ್ನೊಬ್ಬ ಬಡವ ಅಥವಾ ಸಾಮಾನ್ಯ – ಅವನದು ಚಾಚುವ ಕೈ, ಕೆಳಗಿರುವ ಕೈ. ಕೊಡುವ ಕೈಗೆ ತಾನು ಕೊಡುವುದು ಎಂಬ ಅಹಂಕಾರವಿದ್ದರೆ ಬೇಡುವ ಕೈಗೆ ತಾನು ಬಡವ, ಕೆಳಗಿನದು ಎಂಬ ಕೀಳರಿಮೆ ಇರುತ್ತದೆ. ಒಬ್ಬ ದಾನಿ; ಇನ್ನೊಬ್ಬ ಯಾಚಕ.

ದಾಸೋಹದ ಕ್ರಿಯೆಯಲ್ಲೂ ಕೊಡುವ ಕೈ, ಸ್ವೀಕರಿಸುವ ಕೈ ಇದ್ದರೂ ಆ ಕೈಗಳು ತಮ್ಮ ಪಾತ್ರವನ್ನು ಬದಲಿಸಿರುತ್ತವೆ. ಕೊಡುವ ಕೈ ತಾನು ಯಜಮಾನ ಎಂದು ಭಾವಿಸಿದರೆ ತಾನು ದಾನ ಕೊಡಲಿರುವ ವ್ಯಕ್ತಿಯ "ದಾಸ" ಎಂದೇ ಭಾವಿಸುತ್ತದೆ. ದಾಸೋಹ ನಡೆಸುವಾತ ಶ್ರೀಮಂತನಾದರೂ ತಾನು ದಾಸೋಹ ಅಥವಾ ಅನ್ನ ದಾನವನ್ನು ಸ್ವೀಕರಿಸಲು ಬಂದಿರುವ ವ್ಯಕ್ತಿಗಳ "ದಾಸ" ಎಂದೇ ಭಾವಿಸುತ್ತಾನೆ. ತಾನು ಸಾಮಾನ್ಯರಿಗೆ ಸಹಾಯ ಮಾಡುತ್ತಿಲ್ಲ, ಅವರು ತಾನು ನೀಡುವ ಸಹಾಯವನ್ನು ಸ್ವೀಕರಿಸುವ ಕೃಪೆ ತೋರಿಸಿದ್ದಾರೆ ಎಂದೇ ಆತ ಭಾವಿಸುತ್ತಾನೆ. ಇಲ್ಲಿ ಯಜಮಾನನು ದಾಸನಾಗುತ್ತಾನೆ, ದಾಸನು ಯಜಮಾನನಾಗುತ್ತಾನೆ. ಇದು "ದಾಸೋಹ"ದ ನಿಜವಾದ ಪರಿಕಲ್ಪನೆ.

ಸಿದ್ಧಗಂಗೆಯನ್ನು ಒಮ್ಮೆ ನೋಡಿ ಬಂದವರಿಗೆ ಒಂದು ಮರೆಯದ ಅನುಭವವೆಂದರೆ ಅಲ್ಲಿಗೆ ಬಂದವರಿಗೆಲ್ಲ ಊಟ ಹಾಕಲಾಗುತ್ತದೆ; ದಿನವೂ ಅಲ್ಲಿ ಅವಕಾಶ ಪಡೆದಿರುವ ಕನಿಷ್ಠ ಒಂಬತ್ತು ಸಾವಿರ ಬಡ ವಿದ್ಯಾರ್ಥಿಗಳಿಗೆ ಆಹಾರ ನೀಡಲಾಗುತ್ತದೆ. ಅದು ನಿಜವಾದ "ದಾಸೋಹ"ವಲ್ಲದೆ ಮತ್ತೇನು ? ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಯವರು ಯುವ ಅಥವಾ ಮಧ್ಯ ವಯಸ್ಕರಾಗಿದ್ದಾಗ ಮಠದ ಹೊಲಗಳಲ್ಲಿ ಸ್ವತಃ ಉಳುಮೆ ಮಾಡುತ್ತಿದ್ದುದನ್ನು, ಹಳ್ಳಿ ಹಳ್ಳಿಗಳಿಗೆ ಹೋಗಿ ಜನರಿಂದ ಧಾನ್ಯ ಧವಸಗಳನ್ನು ಪಡೆದು ಅನ್ನಸಂತರ್ಪಣೆ ನಡೆಸುತ್ತಿದ್ದುದನ್ನು ಜನರು ನೆನಪಿಸಿಕೊಳ್ಳುತ್ತಾರೆ. ಅವರದು ಶ್ರಮಪೂರ್ವಕ "ಕಾಯಕ" ಆದಾಗಿತ್ತು. ಅವರಿಗೆ ತಾವು ಅಂತಹ ಒಂದು ಆಹಾರ ನೀಡುವ ದೊಡ್ಡ ಕೇಂದ್ರದ ಯಜಮಾನರು ಎಂಬ ಭಾವನೆ ಬರಲು ಸಾಧ್ಯವೇ ಇಲ್ಲ. ಅದೊಂದು ಸೇವೆ, ಭಗವಂತನ ಉಪಾಸನಾ ವಿಧಾನ, ಅಪೂರ್ವ ಅವಕಾಶ, ಬದುಕಿನ ಗುರಿ ಎಂದೇ ಸಹಜ ವಿನೀತ ಭಾವದಿಂದ ಪರಿಭಾವಿಸುತ್ತಾರೆ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಜೀವ ಅದು. ಪರಿಪಕ್ವ ಹೃದಯದ ನಿಜವಾದ "ದಾಸೋಹಿ" ಎಂದರೆ ಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿ : ಅವರು ದಾಸೋಹ ಪರಿಕಲ್ಪನೆಯ ನಿಜವಾದ ಸಂಕೇತವೇ ಹೌದು. ಅಂತೆಯೇ ಕಾಯಕ ಯೋಗದ ಸಾಕಾರದ ಸ್ವರೂಪ. ಎಲ್ಲವನ್ನೂ ತೊರೆದು ಸನ್ಯಾಸಿಗಳಾಗಿ ಸನ್ಯಾಸ ಜೀವನದ ಸಾಧಕ ಜೀವನವನ್ನು ನಡೆಸುತ್ತ ಲಕ್ಷಾಂತರ ಸಂಸಾರಗಳನ್ನು ಮೇಲಕ್ಕೆ ಎತ್ತಿ ನಿಲ್ಲಿಸಿದ್ದಾರೆ. ಅವರು ನಾಲ್ಕು ಗೋಡೆಗಳ ಮಧ್ಯದ ಸಂಸಾರದ ಜೀವನವನ್ನು ತ್ಯಜಿಸಿದ್ದರೂ ಇಡೀ ವಿಶ್ವ ಅವರ ಕುಟುಂಬವಾಗಿದೆ. ಭಾರತದಲ್ಲಿ ಸಿದ್ಧಗಂಗೆಗೆ ಸಮಾನವಾದ ಕ್ಷೇತ್ರ ಸಿದ್ಧಗಂಗೆಯೇ; ಡಾ. ಶ್ರೀ ಶ್ರೀ ಸ್ವಾಮೀಜಿಯವರಿಗೆ ಸಂವಾದಿ ಎನ್ನಿಸುವವರು ಡಾ. ಶ್ರೀ ಶ್ರೀ ಸ್ವಾಮೀಜಿ ಅವರೇ. ❑

## ಶ್ರೀವಾಣಿ

ಸ್ವಾತಂತ್ರ್ಯ ಬಂದು ದಶಕಗಳೇ ಕಳೆದು ಹೋದರೂ ಬಡತನ ಇಂದು ದೇಶವನ್ನು ಕಿತ್ತು ತಿನ್ನುತ್ತಿದೆ. ಮಠದಲ್ಲಿ ಆಶ್ರಯ ಪಡೆದಿರುವ ಅದೆಷ್ಟೋ ಮಕ್ಕಳಿಗೆ ಹಾಸಿಕೊಳ್ಳಲು ಹಾಸಿಗೆ ಬೇಡ ಚಾಪೆ ಕೂಡ ಗತಿಯಿಲ್ಲ. ಹೊದೆಯಲು ಒಂದು ಹಚ್ಚಡ ಅಂದರೆ ಬೆಡ್‌ಷೀಟ್ ಕೂಡಾ ಇಲ್ಲ. ಪುಟ್ಟ ಪುಟ್ಟ ಮಕ್ಕಳು ಒಂದು ಚಿಕ್ಕ ಚಾಪೆಯ ಮೇಲೆ ಇಬ್ಬರು ಮಲಗುತ್ತಾರೆ. ಒಂದೇ ಬೆಡ್‌ಷೀಟನ್ನು ಇಬ್ಬರು ಹೊದೆಯುತ್ತಿರುವ ದೃಶ್ಯ ನೋಡಿದಾಗ ಅತೀವ ನೋವಾಗುತ್ತದೆ. ಒಂದು ಟವೆಲ್ ಕೊಳ್ಳುವುದಕ್ಕೂ ಒದ್ದಾಡುತ್ತವೆ. ಅಂಥ ಮಕ್ಕಳ ಭವಿಷ್ಯದ ಬಗ್ಗೆ ನಮಗೆ, ಸಂಸ್ಥೆಗೆ ಸದಾ ಚಿಂತೆಯಾಗಿದೆ. ನಮ್ಮ ಪೂಜ್ಯ ಗುರುಗಳು ನಮಗೆ ನೀಡಿದ ಮಂತ್ರ ಉಪದೇಶ ನೊಂದವರ ಬದುಕಿನ ಬಗ್ಗೆ ಸದಾ ಸೇವೆಯ ದೀಪ ಹಚ್ಚುವುದೇ ಶ್ರೀಮಠದ ಧರ್ಮ ಎಂಬುದನ್ನು ''ಸದಾ ಜಾಗರವಿದ್ದು ಬಸವಾದಿಯ ಸಲಹುವ'' ದೀಕ್ಷೆಯನ್ನು ಹೊತ್ತು ನಡೆಯುವಲ್ಲಿ ಆನಂದವನ್ನು ಕಾಣುತ್ತೇವೆ.

# ಶ್ರೀ ಸಿದ್ಧಗಂಗೆಯ ಸಂತರಿಗೆ ನುಡಿ ನಮನ

– ದೇ.ಜೆ.ಗೌ.
ವಿಶ್ರಾಂತ ಕುಲಪತಿಗಳು , ಜಯಲಕ್ಷ್ಮೀಪುರಂ,
ಮೈಸೂರು – ೫೭೦ ೦೧೨

ಪವಿತ್ರ ಸಿದ್ಧಗಂಗಾಶ್ರೀ; ಈ ಅಕ್ಷರಗಳು ಕಿವಿಯ ಮೇಲೆ ಬೀಳುತ್ತಿದ್ದಂತೆ, ಆ ಪವಿತ್ರ ನಾಮವನ್ನು ನೆನೆಯುತ್ತಿದ್ದಂತೆ ರೋಮಾಂಚನ ವಾಗುತ್ತದೆ. ಇಡೀ ದೇಹದಲ್ಲಿ ಹೊಸ ಚೈತನ್ಯ ಸಂಚಾರವಾದಂತೆ ಪುಳಕಿತವಾಗುತ್ತದೆ. ಸಾವಿರಾರು ವರ್ಷಗಳ ಈ ತಪೋಭೂಮಿಯಲ್ಲಿ ಅನೇಕ ಪವಿತ್ರಾತ್ಮಗಳು ನೆಲೆಮೂಡಿವೆ. ಹಲವು ಮಂದಿ ಮಹಾತ್ಮೆಯನ್ನು ಬಂದವರಿಗೆ ಬೋಧಿಸುತ್ತಿರು ವುದಲ್ಲದೆ, ಅಧ್ಯಾತ್ಮದಾಹಿಗಳನ್ನು ದುಃಖಾರ್ತರನ್ನು ಆಶೀರ್ವದಿಸು ತ್ತವೆ. ಇಲ್ಲಿಯ ಮಣ್ಣು ಕಲ್ಲು ಗಿಡಗೆಂಡೆಗಳು ಭಕ್ತರ ಪಾಲಿಗೆ ಜಡ ವಸ್ತುಗಳಲ್ಲ, ಚಿನ್ಮಯ ಶಕ್ತಿಗಳು. ಗಾಳಿಯಲ್ಲಿ ಬೆರೆತ ಇಂಗಾಲಾದಿ ಕಶ್ಮಲಗಳು ತಮ್ಮ ಕಶ್ಮಲತೆಯ ಕಳೆದುಕೊಳ್ಳುವಂತೆ, ಇಲ್ಲಿಗೆ ಬಂದ ಪಾಪಿಗಳ ಪಾಪವನ್ನು ಇಲ್ಲಿಯ ಸತ್ಯಶ್ರೀಗಳು ಹೀರಿಕೊಳ್ಳುತ್ತವೆ. ಇಲ್ಲಿಗೆ ಬರುವ ಲಕ್ಷಾಂತರಮಂದಿ ಭಕ್ತರ ಭಕ್ತಿಪೂರ್ಣ ಓಂಕಾರ ಇಲ್ಲಿಯ ಸಚರಾಚರ ವಸ್ತುಗಳಲ್ಲಿ ಸಾಕಾರ ಗೊಂಡಂತೆ ತೋರುತ್ತದೆ. ಆಕಾಶವನ್ನು ಹೊತ್ತುಕೊಂಡಿರುವ ಅಲ್ಲಿಯ ಶಿಖಾಕುಡ್ಡದ ಮಧ್ಯಭಾಗದಲ್ಲಿ ನಿಂತು ಸುತ್ತಲೂ ಕಣ್ಣು ಹಾಯಿಸಿದಾಗ ಅಲೌಕಿಕ ಪ್ರಪಂಚವೇ ಕಣ್ಣೆದುರಾದಂತೆ ಭಾಸವಾಗುತ್ತದೆ. ಅಲ್ಲಿಯ ಮಂಗಳದಾಣಗಳನ್ನು ಸ್ಥಾನಪತಿಗಳನ್ನು ಕಾಣುವ ಕಾತರತೆಯಿಂದ ದಾಪುಗಾಲು ಹಾಕುತ್ತಿರುವ ಭಕ್ತವೃಂದವನ್ನು ಶಾಲಾ–ಕಾಲೇಜುಗಳಿಗೆ ಹೊರಟ ವಿದ್ಯಾರ್ಥಿ ಸಮುದಾಯದ ಕಡೆಗೆ ದೃಷ್ಟಿ ಹಾಯಿಸಿದಾಗ, ಹನ್ನೆರಡನೆಯ ಶತಮಾನದ ಕಲ್ಯಾಣವೆ ಪ್ರತ್ಯಕ್ಷವಾದಂತಾಗಿ ಅಲ್ಲಿಯ ಕಣ್ಣಿಗೆಗೊತ್ತಿಕೊಳ್ಳುವಂತಾಗುತ್ತದೆ. ಅಭಿನವ ಬಸವಣ್ಣನವರ ಕಲ್ಯಾಣವೆ ಪ್ರತ್ಯಕ್ಷವಾದಂತಾಗಿ ಅಲ್ಲಿಯ ಮಣ್ಣನ್ನು ಕಣ್ಣಿಗೊತ್ತಿಕೊಳ್ಳುವಂತಾಗುತ್ತದೆ. ಅಭಿನವ ಬಸವಣ್ಣನವರ ತಪೋ ಮಹಿಮೆಯಿಂದಾಗಿ ಆ ಪವಿತ್ರಭೂಮಿ ರಾಷ್ಟ್ರದ ಸಾಂಸ್ಕೃತಿಕ ಕೇಂದ್ರ ವಾಗಿದೆ, ನಾಡಿನ ಕೀರ್ತಿ ಕಳಸವಾಗಿದೆ. ಯೇಸು ಕಲ್ಪನೆಂ ಬ್ರಂಡಕರ ಸ್ವರ್ಗ ಸಾಮ್ರಾಜ್ಯವಾಗಿದೆ.

ವೈರಾಗ್ಯನಿಧಿ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಭುವನದ ಭಾಗ್ಯವೇ ಮೈವೆತ್ತಂತೆ, ಭಾರತೀಯ ಅಧ್ಯಾತ್ಮ ಇತಿಹಾಸವೇ ರೂಪು ಗೊಂಡಂತೆ, ಶಿವಕುಮಾರರೆಂಬಂತೆ ರಾರಾಜಿಸುತ್ತಾರೆ. ಕಾಷಾಯ ವಸ್ತ್ರದೊಳಗಣ ತ್ರಿಪುಂಡಧಾರಿ ಲಿಂಗದೇವನನ್ನು ಕಂಡಂತೆ ಅವರೆದುರಾದ ಭಕ್ತರು ಸಂಭ್ರಮಿಸುತ್ತಾರತೆ. ದುಃಖಾರ್ತರಿಗೆ ಅವರ ಮಂತ್ರಶಕ್ತಿಯಲ್ಲಿ ವಿಶ್ವಾಸವುಂಟು. ವೈರಾಗ್ಯವಿದ್ವತ್ ಮತ್ತು ಮಾನವೀಯತೆ ಮುಪ್ಪುರಿಗೊಂಡು ಮೂರ್ತಿವೆತ್ತ ಮಹಾತೇಜಸ್ವಿ ಕಾವಿಧಾರಿಗಳೆಲ್ಲ ಜಿತಕಾಮರಲ್ಲ ಸನ್ಯಾಸಿಗಳಲ್ಲ; ಖಾದಿ ಧಾರಿಗಳೆಲ್ಲ ಗಾಂಧಿ ವಾದಿಗಳಲ್ಲ–ಕಾವಿ, ಖಾದಿ ಬಹುತೇಕವಾಗಿ ಮೋಸದ ಕಪ್ಪುಗುಳಿಗಳು. ಸ್ವಾಮೀಜಿಯವರ ನುಡಿ ಚೆನ್ನ ನಡೆ ಚೆನ್ನ ಹೃನ್ಮನಗಳು ಚೆನ್ನ. ಅವರು ಕಣ್ತೆರದರೆ ಚಂದ್ರೋದಯ ವಾದಂತೆ, ಬಾಯ್ತೆರದರೆ ವಿಶ್ವಚೈತನ್ಯವೇ ಮಾತಾಡಿದಂತೆ ಅವರ ಮುಗುಳುನಗೆ ಮಾತೃಹೃದಯದ ಬೆಳಕಿನಲೆಯಂತಿದ್ದು, ಅದರಲ್ಲಿ ಮಿಂದವರು ಜಗತ್ತನ್ನೇ ಮರೆಯುತ್ತಾರೆ. ಅವರು ನಿಜಕ್ಕೂ ಸಂತರು. ಅವರಂಥ ಕಠೋರ ಸಂಯಮದ, ನಿರ್ಮಲ ಮನಸ್ಸಿನ ಸನ್ಯಾಸಿಗಳು ಜಗತ್ತಿನಲ್ಲಿಯೇ ವಿರಳ, ಶ್ರೀ ಶಿವಕುಮಾರ ಸ್ವಾಮಿಗಳಿಗೆ ಶಿವಕುಮಾರ ಸ್ವಾಮಿಗಳೇ ಹೋಲಿಕೆ ಹೊಲಸು ರಾಜಕೀಯದ ಅಂಧಕಾರದಲ್ಲಿ ಇವರೊಂದು ಮಣಿದೀಪ. ಅನೀತಿ ಅನ್ಯಾಯ ಅಧರ್ಮ ಭ್ರಷ್ಟಾಚಾರ ಗಳು ದಟ್ಟವಾಗಿರುವ ಸಮಾಜದಲ್ಲಿ ಇವರು ಆಶಾಕಿರಣವಾಗಿದ್ದಾರೆ.

ಸ್ವಾಮೀಜಿಯವರ ಸುದೀರ್ಘ ಜೀವನಯಾತ್ರೆಯ ಕಾರಣ ಅವರ ನಿರ್ಮಲ ಮನಸ್ಸು. ಅದರ ಜತೆಗೆ ಕಠಿಣಶಿಸ್ತು–ಅಶಿಸ್ತಿನ ಒಂದು ಆಯಾಮ ಸಮಯ ಪಾಲನೆ. ಅವರು ಕ್ರಿಯಾಶೀಲ ಸಂಪನ್ನರು. ಅವರ ಬಳಿ ಆಲಸ್ಯಕ್ಕೆಡೆಯಿಲ್ಲ. ಪ್ರತಿದಿನ ಒಂದೊಂದು ಕಾರ್ಯಕ್ರಮವೂ ಕಾಲಬದ್ಧವಾಗಿ ನಡೆಯಬೇಕು. ಅಕಸ್ಮಾತ್ ಸೂರ್ಯನ ಕಾಲಕ್ರದಲ್ಲಿ ವ್ಯತ್ಯಾಸ ವಾಗಬಹುದು. ಸ್ವಾಮೀಜಿಯ ಸಮಯ ನಿಷ್ಠೆಯಲ್ಲಿ ಲೋಪವಿಲ್ಲ. ಸಮಾರಂಭದಲ್ಲಾಗಲಿ, ಬೇರೆ ಸಂದರ್ಭದಲ್ಲಾಗಲಿ, ಜನರನ್ನು ಕಾಯಿಸು ವುದು ದೇಶದ್ರೋಹವಾಗುತ್ತದೆ. ಯಾವುದೋ ಕಾರ್ಯಕ್ರಮದಲ್ಲಿ ಮಂತ್ರಿಗಳು ಒಂದ ಗಂಟೆ ತಡವಾಗಿ ಬಂದರೆಂದಿಟ್ಟುಕೊಳ್ಳೋಣ, ಸಭೆಯಲ್ಲಿ ಇನ್ನೂರು ಜನರಿದ್ದರೆ ಇನ್ನೂರು ಗಂಟೆ ಅಂದರೆ ೮ ದಿನದ ಕೆಲಸ ನಷ್ಟವಾಗುತ್ತದೆ. ರಾಷ್ಟ್ರದ ಹಿಂದುಳಿಕೆಗೆ ಇದೂ ಒಂದು ಕಾರಣವೆಂಬ ವಸ್ತುಸ್ಥಿತಿ ನಾಯಕರಿವವರ್ಥವಾಗದಿ ರುವುದೇ ಈ ದೇಶದ ದುರಂತ, ಮಳೆ ಬೀಳಲಿ, ಬಿರುಬಿಸಿಲಿರಲಿ, ಸ್ವಾಮೀಜಿ ನಿರ್ದಿಷ್ಟ ಕಾಲಕ್ಕೆ ಐದು ನಿಮಿಷ ಮುಂಚಿತವಾಗಿಯೆ ವೇದಿಕೆಯ ಮೇಲೆ ಆಸೀನರಾಗುತ್ತಾರೆ. ಹಣ ಕಳೆದು ಹೋದರೆ ಸಂಪಾದಿಸಬಹುದು. ಮನೆ ಮುರಿದು ಬಿದ್ದರೆ ಕಟ್ಟಬಹುದು, ಕಳೆದ ಕಾಲವನ್ನು ಸಂಪಾದಿಸು ವುದು ಸಾಧ್ಯವೇ ಎಂದು ಸ್ವಾಮೀಜಿ ಕೇಳುತ್ತಾರೆ.

ರೈತರ ಮನೆಯಲ್ಲಿ ಹುಟ್ಟಿದ ಸ್ವಾಮೀಜಿಗೆ ರೈತರ ಬಗ್ಗೆ ಸಾಮಾನ್ಯರ ಬಗ್ಗೆ ತುಂಬ ಕಾಳಜಿಯುಂಟು. ಯಾರಾದರೂ ಅವರ ಬಳಿ ಬಂದದ್ದಾದರೆ, ಅವರು ಕೇಳುವ ಮೊದಲ ಪ್ರಶ್ನೆ *'ನಿಮ್ಮೂರಲ್ಲಿ ಮಳೆಯಾಯಿತೆ, ಬೆಳೆ ಚೆನ್ನಾಗಿದೆಯೆ, ರೈತರು ಸುಖವಾಗಿದ್ದಾರೆಯೆ'* ಎಂದು, ಬಂದವರ ಬಾಯಿಂದ ಒಳ್ಳೆಯ ಸುದ್ದಿ ಬಂದರೆ ಮುಗುಳನಗೆ ಬೀರುತ್ತಾರೆ, ಕೆಟ್ಟಸುದ್ದಿ ಬಂದರೆ ಖಿನ್ನರಾಗುತ್ತಾರೆ. ಅವರ ಮಾನವೀಯತೆ ಅನನ್ಯವಾದದ್ದು. ಅವರದು ಮಾತೃಹೃದಯ. ಇಡೀ ಮನುಕುಲಕ್ಕೆ ಶುಭ ಹಾರೈಸುವುದೇ ಅವರ ಬದುಕಿನ ಗುರಿ ತಪಸ್ಸಿನ ಉದ್ದೇಶ.

ಇಂಥ ಮಹಾಸಂತರು ಇನ್ನೂ ಹಲವು ಕಾಲ ಬದುಕಿದ್ದು, ಸಮಾಜದಿಂದ ಉರಿದೇಳುವ ನಂಜನ್ನು ನುಂಗಿ, ಅಮೃತವನ್ನೊಡಲಿ ಎಂದು ಭಗವಂಗನಲ್ಲಿ ಪ್ರಾರ್ಥನೆ ಸಲ್ಲಿಸೋಣ. ☐





# ನನ್ನ ಕಣ್ಣಲ್ಲಿ ಸಿದ್ಧಗಂಗಾ !

– ಡಾ|| ಸಾ.ಶಿ. ಮರುಳಯ್ಯ
ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು

ನಾ ನಿಂತ ನಾಡಿನವರು ಎಂಬ ಹೆಮ್ಮೆ ವ್ಯಕ್ತಿಯದು; ನನ್ನ ಮಡಿಲಲ್ಲಿ ಇಂತಹ ಮಹಾಪುರುಷ ಬೆಳೆದು ಬೆಳಕಾದನಲ್ಲಾ ಎಂಬ ಹಿಗ್ಗು ಆ ನಾಡಿನದು – ಇದು ಉತ್ತರ ಅಮೆರಿಕೆಯ ಹದಿನಾರನೆಯ ಅಧ್ಯಕ್ಷರ ಅಬ್ರಹಾಂ ಲಿಂಕನನ ಮುತ್ತಿನಂಥಾ ಮಾತು. ಈ ಮಾತಿಗೆ ಔಚಿತ್ಯ ಮತ್ತು ಔನ್ನತ್ಯ ಪ್ರಾಪ್ತವಾದದ್ದು ತುಮಕೂರಿನ ಸಿದ್ಧಗಂಗಾ ಕ್ಷೇತ್ರ ಅಧಿಪತಿಗಳೂ, ನಮ್ಮೆಲ್ಲರ ನಡುವೆ ನಡೆದಾಡುವ ಜ್ಯೋತಿ ಸ್ವರೂಪರೂ ಆದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ ಗಳಂಥವರಿಂದ, ತುಮಕೂರಿನ ಪುಣ್ಯಕ್ಷೇತ್ರವೆನಿಸಿದ ಸಿದ್ಧಗಂಗೆ ಯಿಂದ. ಆದರೆ ಈ ಪುಣ್ಯ ಪುರುಷರ ತಪಸ್ಸು, ನಿತ್ಯದ ಜ್ಞಾನ ದಾಸೋಹ ಮತ್ತು ಉದರ ದಾಸೋಹಗಳಿಂದ ಸುಮಾರು ಸಾವಿರ ಸಾವಿರ ವಿದ್ಯಾರ್ಥಿಗಳು ತಮ್ಮ ಬದುಕಿನಲ್ಲಿ ಬೆಳಕು ಕಂಡಿದ್ದಾರೆ, ತಮ್ಮ ತಮ್ಮ ಬಾಳನ್ನು ರೂಪಿಸಿಕೊಂಡಿದ್ದಾರೆ ಅಂದ ಮೇಲೆ ಆ ತಪೋಕ್ಷೇತ್ರದ ಮಹಿಮೆ ವರ್ಣನಾತೀತ.

ಪೂಜ್ಯರು ಪರಿಶುದ್ಧ ಪರಂಜ್ಯೋತಿ ಸ್ವರೂಪರು; ಶುದ್ಧ ಕಾಯಕ ಯೋಗಿಗಳು. ಬಸವಣ್ಣನ ಭಕ್ತಿ, ಅಕ್ಕನ ಭಾವುಕತೆ, ಅಲ್ಲಮನ ವೈರಾಗ್ಯ, ಸಿದ್ಧರಾಮನ ಕಾಯಕ ನಿಷ್ಠೆ – ಇವೆಲ್ಲವನ್ನೂ ಮೈಗೂಡಿಸಿ ಕೊಂಡು ರೂಪಿಸಿಕೊಂಡ ವ್ಯಕ್ತಿತ್ವ ಪೂಜ್ಯರದು. ಅವರಿಗೆ ಸೇವೆಯೇ ಪೂಜೆ, ಮಾನವ ಕಲ್ಯಾಣವೇ ಮಂತ್ರ, ಸಕಲ ಜೀವಕೋಟಿ ಶ್ರೇಯಸ್ಸು ಬಯಸುವ, ಅದಕ್ಕಾಗಿ ಸರ್ವ ಸಮರ್ಪಣಕ್ಕೆ ಸಿದ್ಧವಿರುವ ಹೃದಯ ಶ್ರೀಮಂತಿಕೆಯ ಪ್ರಸಾದ ನೈವೇದ್ಯ ಮತ್ತೆಲ್ಲ ಆನಂದದ ಅರ್ಪಣೆ. ಇಂತಹ ತ್ಯಾಗಮೂರ್ತಿಯಿಂದಾಗಿ ಇಪ್ಪತ್ತನೆಯ ಶತಮಾನದಿಂದ ಇಪ್ಪತ್ತೊಂದಕ್ಕೆ ಕಾಲಿರಿಸುವ ವೇಳೆಗೆ ಭಾರತಾದ್ಯಂತ – ಅಷ್ಟೇಕೆ ? ವಿಶ್ವವ್ಯಾಪಕ ಕೀರ್ತಿಗೆ ಶ್ರೀಕ್ಷೇತ್ರ ಸಿದ್ಧಗಂಗಾ ಪಾತ್ರವಾಯಿತು. ಪೂಜ್ಯರಿಂದಾಗಿ ಸಿದ್ಧಗಂಗೆ ಶುದ್ಧ ಗಂಗೆಯಾದಳು. ಸಿದ್ಧಗಂಗಾ ಕ್ಷೇತ್ರ ಪುಣ್ಯದ ಭಾರತೀಯ ಸಂಸ್ಕೃತಿಯ ತೂಗು ತೊಟ್ಟಿಲಾಯಿತು, ನಿರಂತರ ದಾಸೋಹದ ದೋಣೆಯಾಯಿತು !

ಪೂಜ್ಯ ಶ್ರೀಗಳವರು ತ್ರಿವಿಧ ದಾಸೋಹಿಗಳು ಎಂದು ಖ್ಯಾತಿವೆತ್ತವರಾಗಿದ್ದಾರೆ. ಅವರ ಪರಿಭಾಷಾಕೋಶದಲ್ಲಿ **'ತ್ರಿವಿಧ ದಾಸೋಹ'**ಕ್ಕೆ ಭಾಷ್ಯಾರ್ಥವೇ ಬೇರೆ ಎನಿಸುತ್ತದೆ. ಅದು

*ಜ್ಞಾನ ದಾಸೋಹ*
*ಅನ್ನ ದಾಸೋಹ*
*ಸೇವಾ ದಾಸೋಹ*

– ಈ ತ್ರಿವಿಧ ಶ್ರೀಮಠದ ನಿತ್ಯದ ಕಾಯಕ. ಶ್ರೀಕ್ಷೇತ್ರವು ನೊಂದವರಿಗೆ ಸಾಂತ್ವನ ಹೇಳುವ, ಸಹಾಯ ಹಸ್ತ ನೀಡುವ ತಿಳಿನೀರಿನ ತೀರ್ಥವೂ ಆಗಿದೆ. ಸಾಮಾನ್ಯವಾಗಿ ಹಸಿದ ಹೊಟ್ಟೆಗೆ ಯಾವ ತತ್ತ್ವಬೋಧೆಯೂ ಹಿಡಿಸುವುದಿಲ್ಲ. ಅನ್ನಬ್ರಹ್ಮ ತೃಪ್ತನಾಗಬೇಕು. ಪೂಜ್ಯರು ಯಾರೇ ಆಗಂತಕರು ಮಠಕ್ಕೆ ಬರಲಿ. 'ಬನ್ನಿ ಪ್ರಸಾದ ಸ್ವೀಕರಿಸಿ' ಎಂದು ಆಹ್ವಾನಿಸುತ್ತಾರೆ. ಎಡೆಯೂರ ಜಡೆಮುಡಿಯ ವರಸಿದ್ಧಲಿಂಗ ಯತಿಗಳು ಹದಿನಾರನೆಯ ಶತಮಾನದಲ್ಲಿ ಶ್ರೀಕ್ಷೇತ್ರಕ್ಕೆ ಆಗಮಿಸಿ ಬೆಳಗಿದ ಜ್ಯೋತಿ ಇಂದು ಇಲ್ಲಿ ಜಾಜ್ವಲ್ಯಮಾನವಾಗಿ ಬೆಳಗುತ್ತಿದೆ. ಪೂಜ್ಯ ಶ್ರೀ ಅಟವೀ ಸ್ವಾಮಿಗಳು ಮತ್ತು ಪೂಜ್ಯ ಶ್ರೀ ಉದ್ದಾನಪ್ಪಗಳು ಹತ್ತಿಸಿದ ಒಲೆ ಇಂದಿಗೂ ಆರದೆ ಉರಿಯುತ್ತಲೇ ಇದೆ. ನಿತ್ಯವು ಲಾರಿಗಳಲ್ಲಿ ದವಸಧಾನ್ಯ ಬರುತ್ತಲೇ ಇದೆ. ಅಷ್ಟೇ ಪ್ರಮಾಣದ ಒಲೆಯ ಬೂದಿ ಹೊರಕ್ಕೆ ಸಾಗುತ್ತಲೇ ಇದೆ. ಬಸಿದ ಅನ್ನ ಆರಿಲ್ಲ, ಹಸಿದ ಹೊಟ್ಟೆ ಬಳಲಿಲ್ಲ, ಹರಿವ ನೀರು ಬತ್ತಿಲ್ಲ, ಉರಿವ ಜ್ಯೋತಿ ನಂದಿಲ್ಲ. ತನ್ನ ಆಯುರ್ವಾನದ ನೂರೆಡರ ಗಡಿ ಮುಟ್ಟುತ್ತಿರುವ ಈ ಇಳಿವಯಸ್ಸಿನಲ್ಲೂ ನಡೆದಾಡುವ ಬೆಳಕೆನಿಸಿದ ಇಲ್ಲಿನ ಚೈತನ್ಯದ ಚಿಲುಮೆ ಸದಾ ಜಾಗೃತವಾಗಿ ಪುಟಿಯುತ್ತಲೇ ಇದೆ. ಅದರ ಮುಖಮಂಡಲದ ಬ್ರಹ್ಮತೇಜಸ್ಸು ಕಿಂಚಿತ್ತೂ ಕಳೆಗುಂದಿಲ್ಲ. ಒಮ್ಮೆ ಈ ತೇಜೋಮೂರ್ತಿಯನ್ನು ದರ್ಶಿಸಿದರೆ ಸಾಕು, ಶಿರ ತಾನಾಗಿಯೇ ಅದರ ಪದತಲಕ್ಕೆ ಬಾಗಿ ಹಣೆ ಹಚ್ಚಿ ಮಣಿಯುತ್ತದೆ. ಇಂತಹ ಪಾವನಮೂರ್ತಿ ಮೆಟ್ಟಿದ ನೆಲ ಪಾವನ, ಮುಟ್ಟಿದ ನಾವು ನೀವೆಲ್ಲರೂ ಪಾವನರು ಪುನೀತರು.

ಶ್ರೀ ಸಿದ್ಧಗಂಗಾ ಕ್ಷೇತ್ರದ ಹಾಗೂ ಕ್ಷೇತ್ರ ಪುರುಷರಾಜ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಮಹಿಮೆಗಳನು ಬಣ್ಣಿಸಹೊರಟರೆ ಯುಗಗಳು ಬಳಲುತ್ತವೆ, ಋತುಗಳು ಸೋಲುತ್ತವೆ, ಮಾತಂತೂ ಮೌನತಳೆದು ನಿಲ್ಲುತ್ತದೆ.

ಶತಮಾನೋತ್ಸವದ ಈ ಶುಭ ಸಂದರ್ಭದಲ್ಲಿ ಜಗನ್ನಿಯಾಮಕನು ಪೂಜ್ಯರು ಇನ್ನೂ ಅನೇಕಾನೇಕ ವರ್ಷಗಳವರೆಗೆ ನಮ್ಮೊಡನಿರಲಿ, ನಮ್ಮನ್ನು ಆಶೀರ್ವದಿಸುತ್ತಿರಲಿ ಎಂದು ಪ್ರಾರ್ಥಿಸೋಣ. ☐

# ನೂರೊಂದರ ಮೇರು

– ಗೊ.ರು. ಚನ್ನಬಸಪ್ಪ
ಅಧ್ಯಕ್ಷರು, ಶರಣ ಸಾಹಿತ್ಯ ಪರಿಷತ್ತು,
ಕರ್ನಾಟಕ ಜಾನಪದ ಅಕಾಡೆಮಿ,
ಬೆಂಗಳೂರು

ಇಲ್ಲಿಗೆ ಸುಮಾರು ೧೦೦ ವರ್ಷಗಳ ಹಿಂದೆ ಒಬ್ಬ ತತ್ತ್ವಜ್ಞಾನಿ ಹೇಳಿರುವ ಮಾತೊಂದಿದೆ : "ನಾನು ಈ ಭೂಮಿ ಮತ್ತು ಅದರ ಮೇಲಿನ ಬದುಕಿನಲ್ಲಿ ಎಷ್ಟು ಮುಳುಗಿದ್ದೇನೆಂದರೆ, ಸ್ವರ್ಗ ಮತ್ತು ದೇವತೆಗಳ ಬಗೆಗೆ ಯೋಚನೆಮಾಡಲೂ ಸಾಧ್ಯವಿಲ್ಲದಷ್ಟು". ಈ ಮಾತಿನಂತೆ ಈ ಲೋಕದ ಬಡ ಮಕ್ಕಳಿಗೆ ಭವಿಷ್ಯದ ಭರವಸೆಯನ್ನು ಒದಗಿಸುವ ಮಾನವೀಯ ಮಣಿಹದಲ್ಲಿ ಕಳೆದ ಎಂಬತ್ತು ದಶಕಗಳಿಂದ ಸಂಪೂರ್ಣವಾಗಿ ತೊಡಗಿರುವ ಸಿದ್ಧಗಂಗಾ ಕ್ಷೇತ್ರದ ದಿವ್ಯ ಚೇತನ 'ಕರ್ನಾಟಕ ರತ್ನ' ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಿಗೆ ಈಗ ನೂರೊಂದು ವರ್ಷ.

ಧರ್ಮಗುರುಗಳು ಎಂದರೆ ಹೇಗಿರಬೇಕು ಎನ್ನುವುದಕ್ಕೆ ನಿದರ್ಶನ ರೂಪವಾಗಿ ಜೀವಂತ ಸಾಕ್ಷಿಯಾಗಿ, ಪ್ರತ್ಯಕ್ಷ ಪ್ರಮಾಣವಾಗಿ ಪೂಜ್ಯ ಶ್ರೀಗಳು ನಮ್ಮ ಮುಂದಿದ್ದಾರೆ. ಅವರು ನಮ್ಮಂತಹ ಲೌಕಿಕರ ಮಧ್ಯೆ ಇದ್ದರೂ ಲೋಕದ ಎಲ್ಲ ಹಂಗುಗಳನ್ನೂ ಹಿಂಗಿದ ಮಹಾಂತರು. ಅವರ ಜನ್ಮ ಶತಮಾನೋತ್ಸವವನ್ನು ನಿನ್ನೆ ಮೊನ್ನೆ ಕನ್ನಡ ನಾಡಿಗೆ ನಾಡೇ ಕೂಡಿಕೊಂಡು ಭಕ್ತಿ–ಗೌರವಗಳಿಂದ, ಹೃರ್ಷೋತ್ಸಾಹಗಳಿಂದ ಆಚರಿಸಿದೆ.

## ಮಾನವಮ ಸೇವೆಯೇ ಮಹಾದೇವನ ಪೂಜೆ

ಮಾನವೀಯ ಸಂಬಂಧಗಳೇ ನುಚ್ಚು ನೂರಾಗುತ್ತಿರುವ ಇಂದಿನ ಪ್ರಕ್ಷುಬ್ಧ ಸನ್ನಿವೇಶದಲ್ಲೂ ಮಾನವ ಸೇವೆಯೇ ಮಹದೇವನ ಪೂಜೆಯೆಂದು ಪರಿಭಾವಿಸಿರುವ ಪೂಜ್ಯ ಸಿದ್ಧಗಂಗಾ ಶ್ರೀಗಳ ಬಗೆಗೆ ಎಲ್ಲರೂ ಕಂಡು ಕೇಳಿದ್ದಾರೆ. ಆದರೂ ಆ ನೂರೊಂದರ ಮೇರುವಿಗೆ 'ಮಹಾಮನೆ'ಯ ಗೌರವ ಅರ್ಪಿಸಲು ಮನ ತುಂಬಿ ಬರುತ್ತದೆ.

ಪೂಜ್ಯ ಸ್ವಾಮೀಜಿ ಅವರು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆಸಿಕೊಂಡು ಬರುತ್ತಿರುವ ಜ್ಞಾನಾನ್ನ ದಾಸೋಹದ ಸೇವೆ ಒಂದು ಅದ್ಭುತ. ೧೨ನೆಯ ಶತಮಾನದ ಆತ್ಮಜ್ಞಾನಿ ಅಲ್ಲಮಪ್ರಭು ಬಸವಣ್ಣನವರನ್ನು 'ಯುಗದ ಉತ್ಸಾಹ' ಎಂದು ಕರೆದಿದ್ದಾರೆ. ನಾವು ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳನ್ನು ೨೦–೨೧ನೆಯ ಶತಮಾನದ 'ಸೋಜಿಗ' ಎಂದು ಕರೆಯಬಹುದು.

ಪೂಜ್ಯರ ಅರ್ಪಣಾಭಾವದ ಶ್ರಮ–ಸೇವೆಗಳ ಫಲವಾಗಿ ಶ್ರೀ ಸಿದ್ಧಗಂಗಾ ಇಂದು ವಿಶ್ವಪ್ರಸಿದ್ಧ ಶೈಕ್ಷಣಿಕ ಕೇಂದ್ರವಾಗಿದೆ; ಪ್ರಸಿದ್ಧ ಯಾತ್ರಾ ಕ್ಷೇತ್ರವಾಗಿದೆ. ಪ್ರಾಥಮಿಕ ಹಂತದಿಂದ ಸ್ನಾತಕೋತ್ತರ ಹಂತದವರೆಗೆ ಈಗ ೧೩೫ಕ್ಕೂ ಹೆಚ್ಚು ಶಾಲಾ ಕಾಲೇಜುಗಳನ್ನು ನಡೆಸುತ್ತಿರುವ ಸಿದ್ಧಗಂಗಾ ಶಿಕ್ಷಣ ಸಂಸ್ಥೆ ಸುಮಾರು ೫೦ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಬೋಧನಾಶ್ರಯ ನೀಡಿದೆ. ಶ್ರೀಮಠದ ಬಹುತೇಕ ಶಿಕ್ಷಣ ಸೇವೆ ಸಂದಿರುವುದು ಗ್ರಾಮಾಂತರ ಪ್ರದೇಶಕ್ಕೆ ಶ್ರೀಮಠದಲ್ಲೇ ೮ ಸಾವಿರ ಮಕ್ಕಳಿಗೆ ಉಚಿತ ಊಟ, ವಸತಿ ಮತ್ತು ಶಿಕ್ಷಣ ಸೌಲಭ್ಯ ಕಲ್ಪಿಸಲಾಗಿದೆ. ಕರ್ನಾಟಕದ ಎಲ್ಲಾ ಭಾಗಗಳ ಅಷ್ಟೇ ಅಲ್ಲದೆ, ನೆರೆಯ ರಾಜ್ಯಗಳ ಬಡಮಕ್ಕಳೂ ಇಲ್ಲಿ ಆಶ್ರಯ ಪಡೆದಿದ್ದಾರೆ.

## ತಾಯಿ ಕರುಳು

ಪೂಜ್ಯ ಸ್ವಾಮೀಜಿ ಅವರದು ತಾಯಿ ಕರುಳು, ಪ್ರವೇಶ ಬಯಸಿ ಬರುವ ಯಾವ ಬಡಮಕ್ಕಳನ್ನೂ ಹಿಂದಕ್ಕೆ ಕಳುಹಿಸುವುದಿಲ್ಲ. ಶ್ರೀಮಠದ ಆಶ್ರಯದಲ್ಲಿ ಯಾವುದೇ ಜಾತಿ, ಮತ ಭೇದವಿಲ್ಲದೆ ಎಲ್ಲ ವರ್ಗಗಳಿಗೆ ಸೇರಿದ ಮಕ್ಕಳೂ ಇದ್ದಾರೆ. ಅವರ ಕಾರುಣ್ಯದ ಕರುಳು ಎಂತಹುದು ಎಂಬುದಕ್ಕೆ – ಒಮ್ಮೆ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಸಂಘದ ಒಂದು ವಾರ್ಷಿಕ ಸಭೆಯಲ್ಲಿ ಪೂಜ್ಯರು ಆಡಿರುವ ಮಾತುಗಳು ಎಂಥವರ ಹೃದಯವನ್ನೂ ಹಿಂಡುತ್ತದೆ. "ಶ್ರೀಮಠದಲ್ಲಿ ಆಶ್ರಯ ಪಡೆದಿರುವ ಎಷ್ಟೋ ಮಕ್ಕಳಿಗೆ ಹಾಸಿಕೊಳ್ಳಲು ಒಂದು ಚಾಪೆಯೂ ಇಲ್ಲ, ಹೊದಿಯಲು ಒಂದು ಹಚ್ಚಡಕ್ಕೂ ಗತಿಯಿಲ್ಲ. ಒಂದೇ ಬೆಡ್ ಶೀಟನ್ನು ಇಬ್ಬರು ಹೊದ್ದುಕೊಳ್ಳುವುದನ್ನು ಕಂಡಾಗ, ಮಕ್ಕಳು ತಾವು ತೊಳೆದುಕೊಂಡ ಮುಖವನ್ನು ಒರೆಸಿಕೊಳ್ಳಲು ಒಂದು ಅರಿವೆಯ ಚೂರೂ ಇಲ್ಲದೆ ತೊಟ್ಟ ಅಂಗಿಯಲ್ಲೇ ಮುಖ ಒರೆಸಿಕೊಳ್ಳುವುದನ್ನು ನೋಡಿದಾಗ ಅತೀವ ನೋವಾಗುತ್ತದೆ. ಇಂಥ ಮಕ್ಕಳ ಬಗೆಗೇ ನಮಗೆ ಸದಾ ಚಿಂತೆ" ಎಂದರು. ಈ ಮಾತುಗಳು ಮಾಡಿದ ಪರಿಣಾಮ ಅಷ್ಟಿಷ್ಟಲ್ಲ. ಸಾವಿರಾರು ಹೊದಿಕೆ ಮತ್ತು ಟವೆಲ್ಲುಗಳ ದೊಡ್ಡ ಕೊಡುಗೆಯೇ ಹರಿದು ಬಂದಿತು. ಅವನ್ನು ಪಡೆದ ಮಕ್ಕಳ ಮುಖದಲ್ಲಿ ಮೂಡಿದ ಹರ್ಷವನ್ನೇ ಸ್ವಾಮೀಜಿ ಅವರು "ಅದು ಪರಶಿವನ ಪ್ರಸನ್ನತೆ" ಎಂದರು !

## ಸೇವೆಯೇ ಧರ್ಮ

ಪೂಜ್ಯ ಸ್ವಾಮೀಜಿ ಅವರು ಸೇವೆಯನ್ನೇ ಧರ್ಮ ಎಂದು ಭಾವಿಸಿದವರು. ಅದು ಮಾನವ ಬದುಕಿನ ಒಂದು ಮಹಾಮಾರ್ಗ ಎಂದು ತಿಳಿದವರು. ಪೂಜ್ಯರ ಬದುಕು ಪ್ರಾಚೀನವಲ್ಲ; ಸಮಕಾಲೀನ ಪುರಾಣವಲ್ಲ; ಪ್ರತ್ಯಕ್ಷ ಪ್ರಮಾಣ. ಅವರು ಬೌದ್ಧಿಕ ಪ್ರಜ್ಞೆ ಮತ್ತು ಆಧ್ಯಾತ್ಮಿಕ ಶಕ್ತಿಗಳ ಸಂಗಮವಾಗಿದ್ದಾರೆ. ಅವರ ದೃಷ್ಟಿ ಕಾಲ–ಕೋಶಗಳನ್ನು ಮೀರಿದ ದೃಷ್ಟಿ. ಅವರು ಇಡುವ ಪ್ರತಿಯೊಂದು ಹೆಜ್ಜೆಗೂ 'ದೈವೀ ಮುದ್ರೆ' ಇದೆ ಎನ್ನಬಹುದು. ಧರ್ಮವು ನಮ್ಮ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳಲ್ಲಿ ಹಾಸು–ಹೊಕ್ಕಾಗಬೇಕೆನ್ನುವುದು ಪೂಜ್ಯರ ಹಂಬಲ. ಅವರು ಧರ್ಮದ ಬಗೆಗೆ ಎಷ್ಟು ನಿಷ್ಠರೋ, ವಿಜ್ಞಾನದ ಬಗೆಗೂ ಅಷ್ಟೇ ಒಲವುಳ್ಳವರು. ಧರ್ಮವಿರಲಿ, ವಿಜ್ಞಾನವಿರಲಿ ದುರ್ಬಳಕೆಯಾಗಿ ವಿನಾಶಕಾರಿಯಾಗಬಾರದೆಂಬುದೇ ಪೂಜ್ಯರ ಸಂದೇಶ.

ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳಿಗೆ ಮಕ್ಕಳಲ್ಲಿ ಸಾತ್ವಿಕತೆ, ರಾಷ್ಟ್ರೀಯತೆ ಮತ್ತು ಸೇವಾ ತತ್ಪರತೆಗಳು ಮೈಗೂಡಬೇಕೆಂಬ ಬಗೆಗೆ ಅಪಾರವಾದ ಕಳಕಳಿ ಇದೆ. ಭಾರತದ ಭವಿಷ್ಯದ ಹಿರಿಮೆಗೆ ದೇಶದ ಐಕ್ಯತೆ ಅತ್ಯಂತ ಅಗತ್ಯವೆಂಬುದನ್ನು, ಮಾನವ ಜನಾಂಗಕ್ಕೆ ಉತ್ತಮವಾದ ಉಜ್ವಲವಾದ ಮತ್ತು ಉದಾತ್ತವಾದ ಬದುಕನ್ನು ಒದಗಿಸಲು ಸಿದ್ಧವಾಗಬೇಕೆಂಬುದನ್ನು ಸಾಮೂಹಿಕ ಪ್ರಾರ್ಥನಾ ಸಭೆಗಳಲ್ಲಿ ಮಕ್ಕಳಿಗೆ ತಿಳಿಸಿ ಹೇಳುತ್ತಲೇ ಇರುತ್ತಾರೆ. ಶ್ರೀಮಠದ ಸಹಸ್ರ ಸಹಸ್ರ ಮಕ್ಕಳು ಸಮವಸ್ತ್ರದಲ್ಲಿ ಕುಳಿತು ಸಲ್ಲಿಸುವ ಆ ಸಾಮೂಹಿಕ ಪ್ರಾರ್ಥನೆಯೇ ಒಂದು ಅದ್ವಿತೀಯ ದೃಶ್ಯ !

ಭಾರತದ ಘನತೆ–ಗೌರವಗಳ ರಕ್ಷಣೆಗೆ, ಪ್ರಗತಿ–ಪುರೋಭಿವೃದ್ಧಿ ಸಾಧನೆಗೆ ಸಮುದಾಯದ ಎರಡು ವರ್ಗಗಳು ಮಹತ್ವದ ಪಾತ್ರ ವಹಿಸಬೇಕಾಗಿದೆ ಎಂದು ಪೂಜ್ಯರು ಯಾವಾಗಲೂ ಹೇಳುತ್ತಿರುತ್ತಾರೆ. ಆ ಎರಡು ವರ್ಗಗಳೆಂದರೆ, ಮಠಾಧೀಶರು ಮತ್ತು ರಾಜಕಾರಣಿಗಳು.

## ಮಠಾಧಿಪತಿಗಳ ಬಗ್ಗೆ

ಮಠಾಧಿಪತಿಗಳ ಬಗೆಗೆ ಹೇಳುತ್ತಾ "ಅವರು ಪ್ರತಿಭಾ ಸಂಪನ್ನರಾಗಿರಬೇಕು; ನಿರಂತರ ಅಧ್ಯಯನಶೀಲರಾಗಿರಬೇಕು; ಪರಿಶುದ್ಧ ಚಾರಿತ್ರ್ಯವಂತರಾಗಿರಬೇಕು; ಲೋಕ ಜೀವನದ ಪೂರ್ಣಪ್ರಜ್ಞೆ ಅವರಿಗಿರಬೇಕು; ಅವರು ಶ್ರದ್ಧಾ ಸಾಧನೆಯ ಆಧ್ಯಾತ್ಮಿಕ ಜೀವಿಗಳಾಗಿರಬೇಕು; ಅವರ ಅಂತರಂಗ – ಬಹಿರಂಗ ಶುದ್ಧವಾಗಿರಬೇಕು; ಸೇವೆಯೇ ಅವರ ಜೀವನಸೂತ್ರವಾಗಿರಬೇಕು" ಎನ್ನುತ್ತಾರೆ.

## ರಾಜಕಾರಣಿಗಳ ಬಗ್ಗೆ

ಹಾಗೆಯೇ, ರಾಜಕಾರಣಿಗಳನ್ನು ಕುರಿತು "ಅವರು ನಿಸ್ವಾರ್ಥಿಗಳಾಗಿರಬೇಕು; ನಿರಹಂಕಾರಿಗಳಾಗಿರಬೇಕು; ಪೂರ್ಣ ಪ್ರಾಮಾಣಿಕರಾಗಿರಬೇಕು; ಕಾರ್ಯ ಸಮರ್ಥರಾಗಿರಬೇಕು; ಜನಪ್ರಾತಿನಿಧ್ಯದ ಪಾವಿತ್ರ್ಯತೆಯನ್ನು ಅರಿತಿರಬೇಕು; ಅವರಿಗೆ ಸರ್ವಸಮಾನ ದೃಷ್ಟಿ ಇರಬೇಕು. ಜನವಿಶ್ವಾಸ ಮತ್ತು ಜನಹಿತವೇ ಮುಖ್ಯವಾಗಿರಬೇಕು; ಸೇಡಿನ ಮನೋಭಾವ – ಪಕ್ಷಪಾತ ಭಾವನೆ ಇರಬಾರದು; ರಾಷ್ಟ್ರನಿಷ್ಠೆ ಅವರ ಆದ್ಯ ಆಯ್ಕೆಯಾಗಬೇಕು. ನಡೆ–ನುಡಿಯಲ್ಲಿ ಸಮಾಜಕ್ಕೆ ಆದರ್ಶವಾಗಿರಬೇಕು" ಎಂದು ಅಪೇಕ್ಷಿಸುತ್ತಾರೆ.

ಸುದೀರ್ಘ ಪೂಜಾನುಷ್ಠಾನ ಮತ್ತು ಸೇವಾನುಭಾವಗಳ ಪೂಜ್ಯರ ನುಡಿಗಳಂತೆ ನಾವು ನಡೆಯುವುದೇ ಅವರಿಗೆ ಅರ್ಪಿಸುವ ನಿಜವಾದ ಭಕ್ತಿ–ಗೌರವ.

*(ಕೃಪೆ : ಮಹಾಮನೆ)*

**ಶ್ರೀವಾಣಿ**

"ಮನುಷ್ಯ ಹೇಡಿಯಾಗಬಾರದು. ಆತ್ಮವಿಶ್ವಾಸವುಳ್ಳವನಾಗಬೇಕು. ಒಂದಕ್ಕೆ ಹತ್ತು ಮಾಡುತ್ತೇನ ಎಂಬ ನಿಷ್ಠೆಯಿರಬೇಕು"
ಎಂಬ ನಮ್ಮ ಪೂಜ್ಯ ಗುರುಗಳ ವಾಣಿ ನಮ್ಮ ಜೀವನದ ಧ್ಯೇಯ.

# ಕಲ್ಪತರು ನಾಡಿನಲ್ಲಿ ಕಾಯಕ ಯೋಗಿಯ ಮೌನಕ್ರಾಂತಿ

- ಎಸ್.ಆರ್. ಆರಾಧ್ಯ
ಸುದ್ದಿ ಸಂಪಾದಕರು, ಉದಯ ಟಿವಿ, ಬೆಂಗಳೂರು,
ನಂ. ೧೫೨೩, ೧೧ನೇ ಮೈನ್, ವಿಜಯನಗರ,
ಬೆಂಗಳೂರು-೫೬೦ ೦೪೦

ಕಲ್ಪತರು ನಾಡಿನಲಿ ಕಂಗೊಳಿಸುತ್ತಿರುವ ಶ್ರೀ ಸಿದ್ಧಗಂಗಾ ಮಠ ಶರಣ ಸಂಸ್ಕೃತಿಯ ಸಂಕೇತ. ಬಸವ ತತ್ತ್ವದ ವಿನೂತನ ಪ್ರಯೋಗಾಲಯ. ದಾಸೋಹ ಕೈಂಕರ್ಯದ ಮಾದರಿ ಪಾಠಶಾಲೆ. ಅಸಂಖ್ಯಾತ ಹತಭಾಗ್ಯರ ಬಾಳಿನ ಆಶಾಕಿರಣ.

ಶ್ರೀ ಸಿದ್ಧಲಿಂಗೇಶ್ವರ ಯತಿಗಳ ತಪೋಭೂಮಿಯಾದ ಈ ಬೆಟ್ಟದ ತಪ್ಪಲಿನಲ್ಲಿ ಉದ್ದಾನ ಶಿವಯೋಗಿಗಳಿಂದ ಸನ್ಯಾಸ ದೀಕ್ಷೆ ಸ್ವೀಕರಿಸಿದ ಶ್ರೀ ಶಿವಕುಮಾರರು ಅದ್ಭುತ ಪವಾಡವನ್ನೇ ಮೆರೆದಿಹರು. ಶ್ರೀಗಳ ಅವಿರತ ಪರಿಶ್ರಮದ ಫಲವಾಗಿ ಸಿದ್ಧಗಂಗೆ ಜ್ಞಾನಗಂಗೆಯಾಗಿ ಪ್ರವಹಿಸುತ್ತಿದೆ.

ಶಿಕ್ಷಣ ರಂಗದಲ್ಲಿ ಮೌನಕ್ರಾಂತಿಯ ಮೂಲಕ ಲಕ್ಷಾಂತರ ಬಡವರ ಮನೆಯಂಗಳದಿ ಹೊಸ ಬೆಳಕು ಮೂಡಿಸಿರುವ ಶ್ರೀಗಳು ನಾಡಿನ ಏಳಿಗೆಗೆ ಅನನ್ಯ ಕೊಡುಗೆ ಸಲ್ಲಿಸಿದ್ದಾರೆ. ಮಾನವ ಸಂಪನ್ಮೂಲ ಅಭಿವೃದ್ಧಿಗೆ ಶ್ರೀಮಠದ ಕಾಣಿಕೆ ಅತ್ಯಂತ ಮಹತ್ವಪೂರ್ಣವಾದುದು.

ಕೇವಲ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳಿಗೆ ಆಶ್ರಯ ತಾಣವಾಗಿದ್ದ ಸಿದ್ಧಗಂಗಾ ಮಠದಲ್ಲೀಗ ಸಹಸ್ರಾರು ಕಂದಮ್ಮಗಳ ಕಲರವ ಕೇಳುತಲಿದೆ. ಅಕ್ಷರ ದಾಸೋಹದ ಜೊತೆಗೆ ಹಸಿದು ಬಂದ ಅಶನಾರ್ಥಿಗಳಿಗೆ ನಿರಂತರ ಅನ್ನದಾಸೋಹ ಸೇವೆಯೂ ಅನೂಚಾನವಾಗಿ ನಡೆಯುತ್ತಿದೆ.

ಜಾತಿ-ಧರ್ಮಗಳ ತಾರತಮ್ಯವಿಲ್ಲದೆ ಶ್ರೀಮಠದಲ್ಲಿ ಎಲ್ಲ ಮಕ್ಕಳನ್ನೂ ಸಮಾನ ಪ್ರೀತಿಯಿಂದ ಪಾಲನೆ ಮಾಡುತ್ತಿರುವುದು ಪ್ರಶಂಸನೀಯ; ಸಾಮೂಹಿಕ ಪ್ರಾರ್ಥನೆ, ಸಹಭೋಜನ ವ್ಯವಸ್ಥೆ ಭಾವೈಕ್ಯತೆಯ ಭಾವನೆ ಬೆಸುಗೆಗೆ ತುಂಬಾ ಸಹಕಾರಿಯಾಗಿವೆ.

ಗುರುಕುಲ ಪರಂಪರೆಯ ವಾತಾವರಣದಲ್ಲಿ ಮಕ್ಕಳಿಗೆ ವಿದ್ಯೆಯ ಜೊತೆಗೆ ವಿನಯ, ಶಿಸ್ತು, ಮಾನವೀಯ ಮೌಲ್ಯಗಳನ್ನು ರೂಢಿಸಿ ಸತ್ಪ್ರಜೆಗಳಾಗಿ ರೂಪಿಸುವತ್ತ ಇಲ್ಲಿ ವಿಶೇಷ ಗಮನಹರಿಸಲಾಗಿದೆ. ಸಿದ್ಧಗಂಗಾ ವಿದ್ಯಾ ಸಂಸ್ಥೆಗಳ ಜಾಲವೀಗ ಸುತ್ತಲಿನ ಪ್ರದೇಶಗಳಿಗೂ ಹಬ್ಬಿ ವಿಶ್ವವಿದ್ಯಾಲಯವೊಂದರ ಮಟ್ಟಕ್ಕೆ ಬೆಳೆದಿದೆ.

ಹನ್ನೆರಡನೇ ಶತಮಾನದಲ್ಲಿ ಕ್ರಾಂತಿಯೋಗಿ ಬಸವೇಶ್ವರರು ಸಾಮಾಜಿಕ ಸಮಾನತೆಯ ಗುರಿ ಸಾಧನೆಗೆ ಸುದೀರ್ಘ ಸಂಘರ್ಷ ನಡೆಸಿದರು. ಭಕ್ತಿಮಾರ್ಗದ ಮೂಲಕ ಮೋಕ್ಷದ ದಾರಿ ತೋರುವಾಗಲೇ ಐಹಿಕ ಬದುಕನ್ನೂ ಹಸನುಗೊಳಿಸಲು ಅಷ್ಟೇ ಪ್ರಾಮುಖ್ಯತೆ ನೀಡಿದರು.

ಅಂತೆಯೇ 'ಕಾಯಕವೇ ಕೈಲಾಸ' ವೆಂಬ ದಿವ್ಯಮಂತ್ರವನ್ನು ಅಕ್ಷರಶಃ ಪಾಲಿಸುತ್ತಾ ಬಂದಿರುವ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಆಧ್ಯಾತ್ಮ ಮತ್ತು ಸಮಾಜ ಸೇವೆಯ ಸಮನ್ವಯ ಸಾಧಿಸಿ 'ಅಭಿನವ ಬಸವಣ್ಣ'ನೆಂಬ ಖ್ಯಾತಿಗೆ ಪಾತ್ರರಾಗಿದ್ದಾರೆ.

ಭಕ್ತಿ ಆಡಂಬರವಾಗಿ, ಧರ್ಮ ಅಬ್ಬರವಾಗಿ, ಸಮಾಜ ಸೇವೆ ಪ್ರಚಾರ ಪ್ರಿಯತೆಯಾಗಿ ಪರಿವರ್ತಿಸಲ್ಪಟ್ಟಿರುವ ಸದ್ಯದ ಸನ್ನಿವೇಶದಲ್ಲಿ ಸದ್ದುಗದ್ದಲ ವಿಲ್ಲದೆ ನಿತ್ಯ ಕಾಯಕದಲ್ಲಿ ನಿರತರಾಗಿರುವ ಈ ಕರ್ಮಯೋಗಿ ಕನ್ನಡ ನಾಡು ಕಂಡ ಅಪರೂಪದ ಸಂತ.

ಇಳಿವಯಸ್ಸಿನಲ್ಲೂ ಅದಮ್ಯ ಉತ್ಸಾಹದೊಂದಿಗೆ ಸಮಾಜದ ಅಭ್ಯುದಯಕ್ಕಾಗಿ ಅವಿಶ್ರಾಂತವಾಗಿ ದುಡಿಯುತ್ತಿರುವ ಈ ಮಹಾಚೇತನ ಕರ್ನಾಟಕದ ಅನರ್ಘ್ಯರತ್ನ *'ತಾನುರಿದು ಜಗಕ್ಕೆಲ್ಲಾ ಬೆಳಕು ಚೆಲ್ಲುವ ಜ್ಯೋತಿಯಂತೆ'* ಪರೋಪಕಾರಕ್ಕಾಗಿ ಬದುಕು ಸವೆಸುತ್ತಾ ಬಂದಿರುವ ಮಹಾತ್ಯಾಗಿ.

'ಎನಗಿಂತ ಕಿರಿಯರಿಲ್ಲ ಶಿವಶರಣರಿಗಿಂತ ಹಿರಿಯರಿಲ್ಲ' ಎಂಬಂತೆ ಸದಾ ಶಿರಬಾಗಿ ಹೆಜ್ಜೆ ಹಾಕುತ್ತಾ ಬಾಳ ಪಯಣದಿ ನೂರು ವಸಂತಗಳ ಗಡಿದಾಟಿ ಮುಂದಡಿ ಇಡುತ್ತಿರುವ ಈ ಶುಭ ಸಂದರ್ಭದಲ್ಲಿ ತ್ರಿವಿಧ ದಾಸೋಹಿ ಚರಮೂರ್ತಿಗೆ ಇದುವೇ ನನ್ನ ನುಡಿನಮನ. ❑





# ವಿದ್ಯೆಯ ವ್ಯಾಪಾರ ಸರ್ವಥಾ ಸಲ್ಲದು

- ಪರಮಪೂಜ್ಯ ಶ್ರೀ ಶ್ರೀಗಳು

ಸಂದರ್ಶನ : ಎಸ್.ಆರ್. ಆರಾಧ್ಯ
ಸುದ್ದಿ ಸಂಪಾದಕ : ಉದಯ ಟೀವಿ

ತ್ರಿವಿಧ ದಾಸೋಹಿ ಕರ್ನಾಟಕ ರತ್ನ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ನೂರು ವಸಂತಗಳನ್ನು ಪೂರೈಸಿದ ಸಂದರ್ಭದಲ್ಲಿ ನಡೆಸಿದ ಶ್ರೀಗಳ ವಿಶೇಷ ಸಂದರ್ಶನದ ಸಾರಾಂಶವನ್ನು ಇಲ್ಲಿ ಪ್ರಕಟಿಸಲಾಗಿದೆ.

*ಕೆಲವು ಪ್ರಚಲಿತ ಸಮಸ್ಯೆಗಳ ಕುರಿತಂತೆ ಶ್ರೀಗಳು ವ್ಯಕ್ತಪಡಿಸಿದ ಅಭಿಪ್ರಾಯ-ಅನಿಸಿಕೆ ಹೀಗಿದೆ.*

* ಸಮಾಜ ಸೇವೆಗೆ ಪ್ರೇರಣೆ : ವಚನ ಸಾಹಿತ್ಯ ಅಧ್ಯಯನದಲ್ಲಿ ತೊಡಗಿದ್ದಾಗ ಶರಣರ ತತ್ತ್ವ-ವಿಚಾರಗಳು ನಮ್ಮ ಮೇಲೆ ಗಾಢ ಪ್ರಭಾವ ಬೀರಿದವು. ಆಧ್ಯಾತ್ಮಿಕ ಸಾಧನೆ ಮತ್ತು ಸಮಾಜೋದ್ಧಾರ ಎರಡೂ ಸಾಧ್ಯವೆಂಬ ಅಭಿಪ್ರಾಯ ಮೂಡಿತು. ಬಸವಣ್ಣನವರ ಜೀವನ ದೃಷ್ಟಿಯ ಸ್ಫೂರ್ತಿ ನಮ್ಮನ್ನು ಈ ಕಾರ್ಯಕ್ಕೆ ಪ್ರೇರೇಪಿಸಿತು.

* ಶಿಕ್ಷಣದ ವ್ಯಾಪಾರೀಕರಣ : ಸರ್ವರಿಗೂ ಶಿಕ್ಷಣ ನೀಡುವ ಗುರಿಯತ್ತ ನಮ್ಮ ಸಮಾಜ ಸಾಗುತ್ತಿರುವುದು ಸ್ವಾಗತಾರ್ಹ ಸಂಗತಿ. ಆದರೆ ಶಿಕ್ಷಣದ ವ್ಯಾಪಾರೀಕರಣ ವಿಷಾದನೀಯ ಬೆಳವಣಿಗೆ.

ಉತ್ತಮ ಶಿಕ್ಷಣ ಒದಗಿಸುವ ಭರವಸೆಯೊಂದಿಗೆ ಸ್ಥಾಪಿತವಾದ ಕೆಲವು ಖಾಸಗಿ ಸಂಸ್ಥೆಗಳು ಹಣ ಗಳಿಕೆಯ ಹಾದಿ ತುಳಿದಿರುವುದು ದುರದೃಷ್ಟಕರ. ಹಳ್ಳಿಗಳ ಬಡವರ ಮಕ್ಕಳಿಗೆ ಉನ್ನತ ಶಿಕ್ಷಣ ಕೈಗೆಟುಕದಷ್ಟು ದುಬಾರಿಯಾಗಿ ಬಿಟ್ಟಿದೆ.

ಡಿಗ್ರಿ ಕಾಲೇಜುಗಳಿಗೆ ಸರ್ಕಾರಿ ಅನುದಾನ ಕಡಿತ ಪ್ರಸ್ತಾಪ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸಿದೆ. ಒಂದೇ ಪರಿಹಾರ ಮಾರ್ಗವೆಂದರೆ ಸರ್ಕಾರವೇ ಎಲ್ಲ ಶಿಕ್ಷಣ ಸಂಸ್ಥೆಗಳನ್ನು ವಹಿಸಿಕೊಂಡು ಎಲ್ಲ ಮಕ್ಕಳಿಗೆ ಕಡಿಮೆ ವೆಚ್ಚದಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣ ನೀಡಲು ಮುಂದೆ ಬರಬೇಕು.

* ಪಠ್ಯಕ್ರಮ ಸುಧಾರಣೆ : ನಮಗೆಲ್ಲಾ ಹೈಸ್ಕೂಲ್ ವಿದ್ಯಾಭ್ಯಾಸದ ವೇಳೆಗೆ ರಾಮಾಯಣ-ಮಹಾಭಾರತ ಗ್ರಂಥಗಳ ಸ್ಥೂಲ ಪರಿಚಯವಾಗುತ್ತಿತ್ತು. ನೈತಿಕ ಮೌಲ್ಯಗಳನ್ನು ರೂಢಿಸಿಕೊಳ್ಳಲು ಇದರಿಂದ ಸಹಾಯವಾಗುತ್ತಿತ್ತು. ಈಗ ಬುದ್ಧಿ ವಿಕಾಸಕ್ಕೆ ಹೆಚ್ಚು ಒತ್ತು ನೀಡಲಾಗುತ್ತಿದೆ. ಮಕ್ಕಳ ಪರಿಪೂರ್ಣ ವ್ಯಕ್ತಿತ್ವ ವಿಕಾಸ ವಿದ್ಯಾಭ್ಯಾಸದ ಗುರಿಯಾಗಬೇಕು. ಈ ನಿಟ್ಟಿನಲ್ಲಿ ತಜ್ಞರು ಪರಿಶೀಲಿಸಿ ಪಠ್ಯಕ್ರಮದಲ್ಲಿ ಸೂಕ್ತ ಮಾರ್ಪಾಡುಗಳನ್ನು ತರಬೇಕು.

* ಮಠಾಧಿಪತಿಗಳಿಗೆ ಕಿವಿಮಾತು : ಜನರಲ್ಲಿ ಮಾನವೀಯತೆ, ಧಾರ್ಮಿಕ ಶ್ರದ್ಧೆಯ ಜಾಗೃತಿ ಮೂಡಿಸುವುದು ಮಠಗಳ ಸ್ಥಾಪನೆಯ ಮೂಲ ಉದ್ದೇಶವಾಗಿತ್ತು. ಈಗ ಈ ಕಾರ್ಯದಲ್ಲಿ ಬಹಳ ಲೋಪವಾಗಿ ಬಿಟ್ಟಿದೆ. ಮಠಾಧಿಪತಿಗಳು ಸಂಪತ್ತಿನ ಸಂಗ್ರಹ, ವೈಭೋಗದ ಜೀವನ ವ್ಯಾಮೋಹಗಳಿಗೆ ಸಿಲುಕದೆ ಸಮಾಜಕ್ಕೆ ಸೂಕ್ತ ಮಾರ್ಗದರ್ಶನ ನೀಡುವತ್ತ ಕಾರ್ಯೋನ್ಮುಖರಾಗಬೇಕು.

* ಧರ್ಮ-ರಾಜಕಾರಣ : ಧರ್ಮ ಮತ್ತು ರಾಜಕಾರಣದ ನಡುವೆ ಸಾಮರಸ್ಯ ಇಲ್ಲದಂತಾಗಿದೆ. ರಾಜಕಾರಣ ಧರ್ಮದ ಒಂದು ಅಂಗ. ಎಲ್ಲಿಯವರೆಗೆ ರಾಜಕಾರಣಿಗಳು ಧರ್ಮ ಪರಿಪಾಲನೆ ಮನೋಭಾವ ಉಳ್ಳವರಾಗಿರುತ್ತಾರೋ ಅಲ್ಲಿಯವರೆಗೆ ಶ್ರೇಷ್ಠ ಮಟ್ಟದ ಆಡಳಿತ ಸಾಧ್ಯ. ಸದ್ಯ ರಾಜಕಾರಣ ಬಹಳ ಪ್ರಭಾವಶಾಲಿ ಶಕ್ತಿಯಾಗಿ ಬೆಳೆದಿದ್ದು ಧರ್ಮ ಗೌಣವಾಗುತ್ತದೆ. ರಾಜಕಾರಣಿಗಳು ಮೂಲಭೂತ ತತ್ತ್ವಗಳನ್ನು ಮೀರಿ ನಡೆದರೆ ಸಮಾಜದ ಶ್ರೇಯಸ್ಸಿಗೆ ಕಂಟಕ ತಪ್ಪಿದ್ದಲ್ಲ.

* ಭಯೋತ್ಪಾದನೆ ಸವಾಲು : ಧರ್ಮವನ್ನು ಸರಿಯಾಗಿ ಅರ್ಥಮಾಡಿಕೊಂಡರೆ ಈ ಸಮಸ್ಯೆಯೇ ಉದ್ಭವಿಸುವುದಿಲ್ಲ. ಧರ್ಮ ಮತ್ತು ಸಂಪ್ರದಾಯವನ್ನು ಕೆಲವು ಅಜ್ಞಾನಿಗಳು ತಪ್ಪಾಗಿ ಅರ್ಥೈಸಿ ಜಾತಿ–ಮತಗಳ ಹೆಸರಿನಲ್ಲಿ ಬಡಿದಾಡುತ್ತಿರುವುದು ಶೋಚನೀಯ.

* ಜಾತೀಯತೆ ಪಿಡುಗು : ನಮ್ಮ ಸಮಾಜದಲ್ಲಿ ಜಾತಿ ವ್ಯವಸ್ಥೆ ದಿನೇ ದಿನೇ ಗಟ್ಟಿಯಾಗುತ್ತಿರುವುದು ವಿಪರ್ಯಾಸಕರ. ಇದಕ್ಕೆಲ್ಲಾ ರಾಜಕೀಯ ಅವಾಂತರವೇ ಮುಖ್ಯ ಕಾರಣ. ಜಾತಿ ರಾಜಕಾರಣ ಸಾಮಾಜಿಕ ಸಾಮರಸ್ಯದ ವಾತವರಣವನ್ನು ಕೆಡಿಸುತ್ತಿದ್ದು ಇದನ್ನು ಸರಿಪಡಿಸದಿದ್ದಲ್ಲಿ ಮುಂದಿನ ದಿನಗಳಲ್ಲಿ ಸಮಾಜ ಹೆಚ್ಚಿನ ಅಪಾಯ ಎದುರಿಸಬೇಕಾಗಿ ಬರಬಹುದು.

* ನೈತಿಕ ಅಧಃಪತನ : ಆಧುನಿಕತೆಯ ಪ್ರಭಾವ ದಿಂದಾಗಿ ಮಾನವನ ಬದುಕು ಸಂಕೀರ್ಣವಾಗುತ್ತಿದೆ ನಿಜ. ಸಾತ್ವಿಕ ಜೀವನ ಶೈಲಿ ಕ್ರಮೇಣ ಕಣ್ಮರೆಯಾಗುತ್ತಿದ್ದು, ಮಾನವತ್ವದ ಬದಲು ದಾನವತ್ವ ಮೆರೆಯ ತೊಡಗಿದೆ. ಸಮಾಜವನ್ನು ಸರಿದಾರಿಗೆ ತರುವ ಕಾರ್ಯ ಬಹಳ ಕಠಿಣವಾದ ಕೆಲಸವೇ ಸರಿ. ನನಗೂ ಕಾಲ ಮೀರುತ್ತಿರುವುದರಿಂದ ಈ ನಿಟ್ಟಿನಲ್ಲಿ ಹೆಚ್ಚಿನ ಪ್ರಯತ್ನ ಸಾಧ್ಯವಾಗಲಾರದು. ಈ ಸಮಸ್ಯೆ ನಮ್ಮನ್ನೂ ಬಹಳವಾಗಿ ಕಾಡುತ್ತಲೇ ಇದೆ.

* ನಾಡಿನ ಜನರಿಗೆ ಸಂದೇಶ : ರಾಷ್ಟ್ರಪತಿಯಾಗಿದ್ದಾಗ ಡಾ॥ ಅಬ್ದುಲ್ ಕಲಾಂ ಸಾಹೇಬರು ಮುಂದಿಟ್ಟ ಹನ್ನೊಂದು ಸೂತ್ರಗಳು ಬಹಳ ಮಹತ್ವದ್ದು, ಅವುಗಳ ಅನುಷ್ಠಾನಕ್ಕೆ ಎಲ್ಲರೂ ಮುಂದಾಗಬೇಕು. ಜನರು ಕಷ್ಟಜೀವಿಗಳಾಗಿ ಬಸವಣ್ಣನವರ ಕಾಯಕ ತತ್ತ್ವ ಅನುಸರಿಸುವ ಮೂಲಕ ತಾವು ಸುಖಿಗಳಾಗಿ ದೇಶದ ಅಭಿವೃದ್ಧಿಗೂ ಶ್ರಮಿಸಬೇಕು. ಕೇವಲ ಹಣ ಸಂಗ್ರಹದಿಂದ ಏನೂ ಪ್ರಯೋಜನವಿಲ್ಲ. ಸಂಪಾದನೆ ಸದ್ವಿನಿಯೋಗವಾದಾಗಲೇ ಜೀವನದಲ್ಲಿ ಸಾರ್ಥಕತೆ ಕಾಣಲು ಸಾಧ್ಯ.

* ಸಾಧನೆಯ ಸಂತೃಪ್ತಿ :- ಮಕ್ಕಳ ಪಾಲನೆ ತಮಗೆ ಅಪಾರ ತೃಪ್ತಿ ತಂದಿದೆ. ನಮ್ಮ ಜೀವನದ ಪರಮ ಧ್ಯೇಯವೇ ಅದಾಗಿತ್ತು. ಬಡ ಮಕ್ಕಳು, ಅನಾಥರು, ನಿರ್ಗತಿಕರನ್ನು ಒಳ್ಳೆಯ ಪ್ರಜೆಗಳಾಗಿ ರೂಪಿಸುವ ನಿಟ್ಟಿನಲ್ಲಿ ನಮ್ಮಿಂದ ಸಾಧ್ಯವಾದ ಪ್ರಯತ್ನ ಮಾಡಿದ್ದೇವೆ. ಆದರೆ ನಿರೀಕ್ಷಿಸಿದಷ್ಟು ಮಾಡಲಾಗಲಿಲ್ಲವಲ್ಲ ಎಂಬ ಕೊರಗು ಇದ್ದೇ ಇದೆ. ಅನೇಕಾನೇಕ ಜನರು ನನ್ನ ಬಳಿ ಬಂದು ಶ್ರೀ ಮಠದ ಆಶ್ರಯದಿಂದಾಗಿ ತಾವು ಸುಸ್ಥಿತಿ ತಲುಪಿರುವುದಾಗಿ ಹೇಳಿದಾಗ ಬಹಳ ಸಂತೋಷ ವಾಗುತ್ತದೆ. ಅವರ ಮಕ್ಕಳ ಭವಿಷ್ಯವಂತೂ ಈಗ ಸುರಕ್ಷಿತವಾಗಿದೆಯಲ್ಲ ಎಂಬ ಸಂತೃಪ್ತಿ ಭಾವ ಮೂಡುತ್ತದೆ. ☐



ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು  
ಬಯಲು ಬಯಲಾಯಿತ್ತಯ್ಯ,  
ಬಯಲ ಜೀವನ, ಬಯಲ ಭಾವನೆ,  
ಬಯಲು ಬಯಲಾಗಿ ಬಯಲಾಯಿತ್ತಯ್ಯ.  
ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು  
ನಾ ನಿಮ್ಮ ನಂಬಿ ಬಯಲಾದೆ, ಗುಹೇಶ್ವರ.

– ಅಲ್ಲಮಪ್ರಭು





# ನಾ ನೋಡಿದ ಸಂತ

– ಎ. ಗುಂಡಾಭಟ್ಟ
ಕಾರ್ಯನಿರ್ವಾಹಕ ಸಂಪಾದಕ
(ಹಿಂದಿನ) ಸಂಯುಕ್ತ ಕರ್ನಾಟಕ,
ನಂ. ೩೪೧, ೯ನೇ ಮುಖ್ಯರಸ್ತೆ, ಡಾಲರ್ಸ್ ಕಾಲೋನಿ,
ಜೆ.ಪಿ. ನಗರ, ಬೆಂಗಳೂರು.

ನಾನೊಬ್ಬ ಪತ್ರಕರ್ತನಾಗಿ ಶ್ರೀ ಸಿದ್ಧಗಂಗಾ ಮಠದ ಶ್ರೀಗಳಾದ ಶ್ರೀ ಶಿವಕುಮಾರ ಸ್ವಾಮಿಗಳನ್ನು ನೋಡಿದ್ದು ಸುಮಾರು ೩೦ ವರ್ಷಗಳ ಹಿಂದೆ. ಮಠದ ಸಮಾರಂಭವೊಂದನ್ನು ವರದಿ ಮಾಡಲು ಹೋಗಿದ್ದೆ. ಪತ್ರಕರ್ತರನ್ನು ಭೇಟಿ ಮಾಡಿ ಕುಶಲ ಸಂಭಾಷಣೆ ನಡೆಸಿದ್ದರು. ಮಠದ ಪರಿಚಯವನ್ನು ಅವರೇ ನಮಗೆ ಮಾಡಿಕೊಟ್ಟು ಭೋಜನ ಶಾಲೆಯನ್ನು ನೋಡಲು ನಮ್ಮನ್ನು ಕರೆದೊಯ್ದರು. ಆಗತಾನೆ ಹೊಸದಾಗಿ ನಿರ್ಮಿಸಿದ್ದ ಕಟ್ಟಡದಲ್ಲಿ ವಿದ್ಯಾರ್ಥಿಗಳು ಊಟ ಮಾಡುತ್ತಿದ್ದರು. ಇದನ್ನು ನೋಡಿದ ಶ್ರೀಗಳಿಗೆ ಅದೆಷ್ಟು ಆನಂದವಾಗಿತ್ತೋ, ನಮ್ಮಗಳ ಮುಖ ನೋಡಿ ಸಂತಸ ವ್ಯಕ್ತಪಡಿಸಿದ್ದುಂಟು.

ಹೀಗೆ ನಾಲ್ಕೈದು ಬಾರಿ ಸಿದ್ಧಗಂಗಾ ಮಠಕ್ಕೆ ಹೋಗಿ ಬಂದದ್ದುಂಟು. ಅಲ್ಲಿನ ಜಾತ್ರೆ ರಾಜ್ಯದಲ್ಲಿಯೇ ಬಹಳ ಪ್ರಸಿದ್ಧ. ರಾಜ್ಯದ ನಾನಾ ಊರುಗಳಿಂದ ಎತ್ತುಗಳನ್ನು ತಂದು ಮಾರಾಟ ಮಾಡುತ್ತಿದ್ದ ರೈತರಿಗೆ ಜಾತ್ರೆ ಎಂದಾಕ್ಷಣ ಅವರ ಮನಸ್ಸಿನಲ್ಲಿ ಮೂಡುತ್ತಿದ್ದ ಚಿತ್ರ ಶ್ರೀ ಸಿದ್ಧಗಂಗಾ ಶ್ರೀಗಳದ್ದು. ಜಾತ್ರೆಯ ಆರಂಭೋತ್ಸವಕ್ಕೆ ಹೋದ ನಮಗೆಲ್ಲ ಜಾತ್ರೆಯ ಸಮಗ್ರ ದರ್ಶನವಾಗುತ್ತಿತ್ತು. ಮಠದಲ್ಲಿ ಉಳಿದ ನಂತರ ಶ್ರೀಗಳ ಆಶೀರ್ವಾದ ಪಡೆದು ವಾಪಸಾಗುತ್ತಿದ್ದೆವು. ಇದನ್ನು ಇಂದಿಗೂ ಮರೆಯಲು ಸಾಧ್ಯವಾಗದು.

ಶ್ರೀ ಸಿದ್ಧಗಂಗಾ ಮಠದ ಈಗಿನ ಪ್ರಗತಿಗೆ ಶ್ರೀ ಶಿವಕುಮಾರ ಸ್ವಾಮಿಗಳೇ ರೂವಾರಿ, ಹಂತ ಹಂತವಾಗಿ ಸಿದ್ಧಗಂಗೆಯ ಚಿತ್ರವನ್ನು ಬದಲಿಸಿ ಇಂದು ವಿಶ್ವದ ಭೂಪಟದಲ್ಲಿ ರಾರಾಜಿಸುವಂತೆ ಮಾಡಿದ್ದಾರೆ. ಇದರ ಹಿಂದೆ ಅವರು ಪಟ್ಟಿರುವ ಶ್ರಮ ಎಷ್ಟೆಂಬುದು ನೋಡಿದವರಿಗೇ ಅರಿವಾಗದಿರದು.

ನಾನೊಮ್ಮೆ ನನ್ನ ಸಂಬಂಧಿಕ ವಿದ್ಯಾರ್ಥಿಯನ್ನು ಎಂಜಿನಿಯರಿಂಗ್ ಕಾಲೇಜಿಗೆ ಸೇರಿಸಲು ಹೋಗಿದ್ದೆ. ಹುಡುಗನ ಪಾಲಕರು ಅಷ್ಟಾಗಿ ಶ್ರೀಮಂತರೇನಲ್ಲ. ನಾನು ಅವರನ್ನು ಭೇಟಿ ಮಾಡಿ, ಎಂಜಿನಿಯರಿಂಗ್ ಕಾಲೇಜಿಗೆ ಪ್ರವೇಶ ಕೋರಿದೆ. ಅವರು ಅಂದು ಮಠದ ಮುಂಭಾಗದಲ್ಲಿ ಭಕ್ತರಿಗೆ ಯಂತ್ರ ಬರೆದುಕೊಡುವಲ್ಲಿ ತೊಡಗಿದ್ದರು. ಮಠದ ಆಡಳಿತ ವರ್ಗದವರೊಬ್ಬರು ನಾನು ಬಂದಿರುವ ಸುದ್ದಿ ಹೇಳಿದರು, ಬಗ್ಗಿದ್ದ ಮುಖವನ್ನೊಮ್ಮೆ ಎತ್ತಿ ನೋಡಿದರು. ನಮಸ್ಕರಿಸಿದೆ. ನನ್ನನ್ನು ನೋಡಿದವರೇ ಹಸನ್ಮುಖರಾಗಿ ಏನು ಬಂದಿದ್ದು ಎಂದರು. ಆಗ ನಾನು ಬಂದ ಕೆಲಸ ತಿಳಿಸಿದೆ. ಕೂಡಲೇ ಹುಡುಗನನ್ನು ಸೇರಿಸಿಕೊಳ್ಳಲು ಸೂಚಿಸಿದರು. ಆಗ ಅವರ ಬಗ್ಗೆ ಇಟ್ಟಿದ್ದ ವಿಶ್ವಾಸ ಇನ್ನೂ ನನ್ನಲ್ಲಿ ಹೆಚ್ಚಿತು. ಸ್ವಾಮಿಗಳು ನನಗೆ ನೀಡಿದ ಪ್ರಸಾದವೆಂದೇ ಭಾವಿಸಿದೆ.

ಇಂಥ ಪುಣ್ಯಪುರುಷರಿಗೆ ಇದೀಗ ೧೦೧ ವರ್ಷಗಳು ತುಂಬಿದೆ. ಈಗಲೂ ಅದೇ ರೀತಿಯ ಚಟುವಟಿಕೆಗಳಲ್ಲಿ ತೊಡಗಿ ಮಠದ ಸೂತ್ರವನ್ನು ಯಶಸ್ವಿಯಾಗಿ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇದು ಕನ್ನಡಿಗರಿಗೆ ಹೆಮ್ಮೆ ತರುವಂತಹ ವಿಷಯ, ಕ್ಷೇತ್ರಕ್ಕೆ ಭೇಟಿಕೊಡುವ ಎಲ್ಲರೂ ಇವರ ಸಾಧನೆಯ ತಪಸ್ಸನ್ನು ಕಂಡು ಬೆರಗಾಗಿದ್ದಾರೆ. ಮಹಾತಪಸ್ವಿ, ದೇವಮಾನವ, ಮಹಾಋಷಿ, ಧ್ಯೇಯ ತಪಸ್ವಿ..... ಮುಂತಾದ ಹೆಸರಿನಿಂದ ಅನೇಕರು ಅವರ ಸೇವೆಯನ್ನು ಕೊಂಡಾಡಿದ್ದಾರೆ. ಅವರು ಮನುಕುಲಕ್ಕೆ ಮಾಡಿರುವ ಸೇವೆಯನ್ನು ಬಣ್ಣಿಸಿದ್ದಾರೆ.

ಶ್ರೀ ಸಿದ್ಧಗಂಗಾ ಶ್ರೀಗಳು ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಸಲ್ಲಿಸುತ್ತಿರುವ ಸೇವೆ ನಿರಂತರವಾಗಿ ಮುಂದುವರೆಯಲಿ ಎಂಬುದೇ ಈ ಸಂದರ್ಭದಲ್ಲಿ ದೇವರಲ್ಲಿ ನನ್ನ ಪ್ರಾರ್ಥನೆ. ☐

# ಅಳುವ ಅನಾಥ ಮಕ್ಕಳಲ್ಲಿ ಶಿವನನ್ನು ಕಂಡವರು

- ನಟರತ್ನಾಕರ ಮಾಸ್ಟರ್ ಹಿರಣ್ಣಯ್ಯ
ರಂಗಭೂಮಿ, ನಂ. ೯೭೯,
೧೩ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ,
ಬೆಂಗಳೂರು-೫೬೦ ೦೭೦.

ತ್ರಿವಿಧ ದಾಸೋಹಿ, ಶತಾಯುಷಿ, ನಡೆದಾಡುವ ಪರಮೇಶ್ವರ ಸ್ವರೂಪಿಗಳಾದ ಶ್ರೀ ಶ್ರೀ ಡಾ. ಶಿವಕುಮಾರಸ್ವಾಮಿಗಳ ಚರಣಾರವಿಂದಗಳಲ್ಲಿ ಪೊಡಮಟ್ಟು ನನ್ನೀ ನುಡಿ ನಮನಕ್ಕೆ ಪೂಜ್ಯರ ಶುಭಾಶೀರ್ವಾದಗಳನ್ನು ಬೇಡುವೆನು.

೧೯೫೩-೫೪. ನಾನು ನಮ್ಮ ತಂದೆಯವರನ್ನು ಕಳೆದುಕೊಂಡ ಬಳಿಕ, ದಿಕ್ಕು ಕಾಣದವನಾಗಿ, ನಮ್ಮ ಜಿಲ್ಲೆಯಾದ ತುಮಕೂರಿಗೆ ಬಂದೆ. ಬದುಕಲ್ಲಿ ಗುರಿಯಿಲ್ಲ, ದಾರಿ ತೋರುವ ಗುರುವಿಲ್ಲ. ನೆಲೆಯಂತೂ ಇಲ್ಲವೇ ಇಲ್ಲ ಅಂದಾಗ ಬಾಳಿಗೆ ಬೆಲೆ ಇನ್ನೆಲ್ಲಿ ಬಂತು. ಇರುವಾಗ ಕೇಳುವವರಿಲ್ಲ - ಸತ್ತರೆ ಲೋಕಕ್ಕೆ ಗೊತ್ತೇ ಆಗೋಲ್ಲಾ. ಹಾಗಿತ್ತು ಅಂದು ನನ್ನ ಜೀವನ. ಶುದ್ಧ ಅಲೆಮಾರಿ. ಅಂಥಾ ಸ್ಥಿತಿಯಲ್ಲಿ ತುಮಕೂರಿಗೆ ಬಂದಾಗ, ಸ್ವಾಮೀಜಿಯವರನ್ನು ಕಂಡು ಅವರ ಕೃಪಾಭಿಕ್ಷೆಯನ್ನು ಯಾಚಿಸಲು ಶ್ರೀಕ್ಷೇತ್ರ ಸಿದ್ಧಗಂಗೆಗೆ ಹೋದೆ. ನಮ್ಮ ತಂದೆಯವರ ಬಗ್ಗೆ ತಿಳಿದಿದ್ದ ಸ್ವಾಮೀಜಿಯವರು, ಪಾದಕ್ಕೆರಗಿದ್ದ ನನ್ನನ್ನು ಮೇಲೆತ್ತಿ ಹಿಡಿದು ಕಣ್ಣಲ್ಲಿ ಕಣ್ಣಿಟ್ಟು ಒಮ್ಮೆ ತಮ್ಮ ಕರುಣಾರಸವನ್ನು ಹಾಯಿಸಿದರು. ಮೈಯಲ್ಲಿ ಒಂದು ಬಗೆಯ ವಿದ್ಯುತ್ ಸಂಚಾರವಾದಂತಾಯ್ತು. ಪೂರ್ಣ ಶೂನ್ಯತೆ ಆವರಿಸಿದ್ದ ಮನದಲ್ಲಿ ಯಾವುದೋ ಒಂದು ಬಗೆಯ ಭರವಸೆಯ ಸಿಂಚನವಾಯ್ತು. ಗುರು ಕೃಪೆಯ ಭಿಕ್ಷೆ ನನ್ನಲ್ಲಿ ಚೈತನ್ಯವನ್ನು ತುಂಬಿದಂತಾಯ್ತು. ಕಣ್ಣಿಂದ ಹರಿದ ಧಾರಾಕಾರವಾದ ನೀರನ್ನು ಒರೆಸಲು ಹೋದ ನನ್ನನ್ನು ತಡೆದರು ಸ್ವಾಮೀಜಿಯವರು. "ಮನದಲ್ಲಿ ಹುದುಗಿರುವ ದುಃಖ ದುಮ್ಮಾನಗಳು ಹರಿದು ಹೋಗಿಬಿಡಲಿ ಬಿಡಿ. ಮನದ ಶಿವಪೀಠ ಶೂನ್ಯವಾದಲ್ಲದೇ, ಅಲ್ಲಿ ಬದುಕಿನರ್ಥ ಕೂರಲು ಸಾಧ್ಯವಿಲ್ಲ. ಅದನ್ನೇ ಬಸವಣ್ಣನವರು ಶೂನ್ಯ ಸಂಪಾದನೆ ಎಂದದ್ದು. ಮನದ ಶೂನ್ಯತೆ ಸಂಪಾದಿತವಾಗಬೇಕೇ ವಿನಃ, ಬಾಳ ಶೂನ್ಯತೆಯಲ್ಲ. ಮೊದಲು ಶಿವ ಪ್ರಸಾದವನ್ನು ಸ್ವೀಕರಿಸಿ ಬನ್ನಿ, ನಂತರ ಶಿವಪಥ ಗೋಚರಿಸುವುದು" ಎಂದರು.

ಅಂದಿನಿಂದ ನನಗರಿವಿಲ್ಲದಂತೇ ನಾನವರ ಅನುಯಾಯಿಯಾದೆ - ಮಾನವ ಸೇವೆಯಲ್ಲಿ ಮತ್ತು ತ್ರಿವಿಧ ದಾಸೋಹದಲ್ಲಿ. ಇಂದಿಗೂ ನನಗೆ ಅವರೇ ಆದರ್ಶ. ನಾನು ಕಂಡಿರುವ ಕೆಲವೇ ಮಠಾಧೀಶರಲ್ಲಿ, ಕಾವೀ ಧಾರಿಗಳಲ್ಲಿ, ಪೀಠಾಧಿಪತಿಗಳಲ್ಲಿ ಶ್ರೀ ಶ್ರೀಯವರೇ ಪ್ರಥಮರು. ಕಾರಣ ನಾವು ಎಲ್ಲೆಲ್ಲೂ ಭಗವಂತನ ವಿಳಾಸವನ್ನು ಹುಡುಕುವವರನ್ನು ನೋಡಬಹುದು. ಅವರು ಯಾರಿಗೂ ಇನ್ನೂ ಅವನು ಸಿಕ್ಕಿಲ್ಲ. ಹುಡುಕುತ್ತಲೇ ಇದ್ದಾರೆ. ಯಾಕೆಂದರೆ ಅವನ ಫೋನ್ ನಂಬರನ್ನೋ, ಕ್ರಾಸನ್ನೋ, ಮೆಯಿನನ್ನೋ, ಬಡಾವಣೆಯನ್ನೋ ಹಿಡಿದು ಹುಡುಕುವವರಿಗೆ ಹೇಗೆತಾನೆ ಸಿಕ್ಕಿಯಾನು ಅವನು ? ಅವರೆಲ್ಲಾ ಸಾಯುವವರೆಗೂ ಬರೀ ಹುಡುಕುವವರೇ. ಆದರೆ ನಮ್ಮ ಸ್ವಾಮೀಜಿಯವರು ಅಳುವ ಅನಾಥ ಮಕ್ಕಳಲ್ಲೇ ಶಿವನನ್ನು ಕಂಡು, ಅವರ ಕಣ್ಣೊರೆಸುವ, ಅವರಿಗೆ ಅನ್ನ, ಅರಿವೆ, ಆಶ್ರಯಾದಿಗಳನ್ನೀಯುತ್ತಾ, ಅವರಲ್ಲೇ ಪರಮಾತ್ಮನನ್ನು ತಾವೂ ಕಂಡು, ನಮಗೂ ತೋರಿಸುವ ಕಾಯಕದಲ್ಲಿ ತಮ್ಮ ಇಡೀ ಬದುಕನ್ನೇ ಸಾರ್ಥಕಪಡಿಸಿಕೊಳ್ಳುತ್ತಿದ್ದಾರೆ. ಅವರಿಗೆ ಶಿವ ಸಾಕ್ಷಾತ್ಕಾರವಾಗಿರುವುದಕ್ಕೆ ಶ್ರೀಕ್ಷೇತ್ರ ಇಷ್ಟೊಂದು ಬೆಳೆದು ನೆರಳಾಗಿರುವುದೇ ಸಾಕ್ಷಿ. ನಾವು ಅವರಲ್ಲೇ ಪರಶಿವನನ್ನು ಕಂಡರೆ ಸಾಕಲ್ಲವೇ ? ಈ ಕಾರಣಕ್ಕಾಗಿಯೇ ನನಗೆ ಅವರ ಸಾನಿಧ್ಯ, ಸೇವೆ, ಸಂಪರ್ಕಗಳು ಶ್ರೇಷ್ಠವಾಗಿರುವುದು.

ಪ್ರತಿ ಶಿವರಾತ್ರಿಯಂದು ಸ್ವಾಮೀಜಿಯವರು ಜಾತ್ರಾ ಮಹೋತ್ಸವದಲ್ಲಿ ನಮ್ಮ ಮಿತ್ರ ಮಂಡಲಿಗೆ ಒಂದು ಅವಕಾಶವನ್ನಿತ್ತು ನಾಟಕದ ಮುಖಾಂತರ, ಭಕ್ತಾದಿಗಳು ಹಾಗೂ ಸ್ವಾಮೀಜಿಯವರ ಸೇವಾ ಸೌಭಾಗ್ಯವನ್ನೀಯುತ್ತಾ, ನಮ್ಮ ಜನ್ಮವನ್ನೂ ಸಾರ್ಥಕ ಮಾಡಿಕೊಳ್ಳಲು ಅವಕಾಶವನ್ನು ಮಾಡಿಕೊಡುತ್ತಿದ್ದಾರೆ - ಅದಕ್ಕೆ ನಾವು ಧನ್ಯರು. ನನ್ನ ಈ ಜನ್ಮವಿರುವವರೆಗೂ ಆ ಸೌಭಾಗ್ಯ ನನ್ನದಾಗಿರಲೆಂದೂ, ಶ್ರೀಕ್ಷೇತ್ರದ ಮತ್ತು ಪೂಜ್ಯ ಸ್ವಾಮೀಜಿಯವರ ಚರಣ ಸೇವಾಸೌಭಾಗ್ಯ ಲಭಿಸುತ್ತಿರಲೆಂದೂ ಬಯಸುತ್ತೇನೆ. □





# ಮಂದಹಾಸದ ನಂದಾದೀಪ

- ರಾಣಿ ಸತೀಶ್
ಮಾಜಿ ಸಚಿವರು, ಬೆಂಗಳೂರು.

ಪ್ರಕೃತಿಯ ಮಡಿಲಲ್ಲಿ ಹೂವಾಗಿ, ಸಮಾಜದ ಸಂಬಂಧಕ್ಕೆ ಶ್ರೀಗಂಧವಾಗಿ ಧಾರ್ಮಿಕ ಕ್ಷೇತ್ರಕ್ಕೆ ಧರ್ಮದ ಅಧಿಪತಿಯಾಗಿ ಸಿದ್ಧಗಂಗಾ ಕ್ಷೇತ್ರದ ಸಿದ್ಧಿಯಾಗಿ "ಕರ್ನಾಟಕದ ರತ್ನ"ವಾಗಿ ಶತಮಾನದ ಶತಾಯುಷಿ ಋಷಿ ಡಾ। ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ೧೦೧ನೇ ವರ್ಷಕ್ಕೆ ನನ್ನ ನೂರೊಂದು ನಮನಗಳು. ನಮ್ಮ ದೇಶದ ಇತಿಹಾಸದಲ್ಲಿ ಅನೇಕ ಸಾಧು ಸಂತರು, ಶರಣರು, ಪ್ರವಾದಿಗಳು, ಪವಾಡ ಪುರುಷರು ನಕ್ಷತ್ರದಂತೆ ಮಿನುಗಿ ನೆನಪಾಗಿ ಉಳಿದಿದ್ದಾರೆ. ಅವರಾರನ್ನೂ ನಾನು ನೋಡಲು ಸಾಧ್ಯವಾಗದಿದ್ದರೂ ನನಗೆ ಸಾಧ್ಯವಾದದ್ದು ನಾನು ಕಾಣದ ದೈವವನ್ನು ಕಂಡದ್ದು ನೂರೊಂದು ವರ್ಷದ "ಶತಮಾನದ ಶರಣ" ಶತಾಯುಷಿ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗಳಲ್ಲಿ.

೧೨ನೆಯ ಶತಮಾನದ ಅಣ್ಣ ಬಸವಣ್ಣನ ಜೊತೆಗೆ ಸಾಮಾಜಿಕ ಪರಿವರ್ತನೆಯ ಪ್ರವರ್ತಕ ಪ್ರಮಥರು ಪ್ರಕಾಶಿಸಿದ್ದನ್ನು ಕೇಳಿದ್ದೇವೆ. ಆದರೆ ಕಂಡಿಲ್ಲ, ಕಂಡಿದ್ದಾದರೆ ಅದು ಪೂಜ್ಯ ಶ್ರೀ ಸಿದ್ಧಗಂಗಾ ಕ್ಷೇತ್ರದ ಪೂಜ್ಯರಲ್ಲಿ.

೨೧ನೆಯ ಶತಮಾನದಲ್ಲಿ ಅಂತಹ ಪುನರಾವರ್ತನೆಯ ಹರಿಕಾರ ಬಸವಣ್ಣನ ಪುನರಾವತಾರದ ತಾರೆ, ನಡೆದಾಡುವ ದೇವರು ಎಂದೇ ಪ್ರಖ್ಯಾತರಾಗಿರುವ ಭಕ್ತಿ, ಜ್ಞಾನ ವೈರಾಗ್ಯಗಳ ಸಂಗಮ, ತ್ರಿವಿಧ ದಾಸೋಹದ ಸೂತ್ರಧಾರಿ ಶ್ರೀಗಳವರು. ನೆಲೆ ಇಲ್ಲದವರಿಗೆ ನೆಲೆಯಾಗಿ, ಭಕ್ತಿಯ ಸೆಲೆಯಾಗಿ, ಧರ್ಮದ ದಾರ್ಶನಿಕರಾಗಿ, ಅರಿವಿನ ಗುರುವಾಗಿ, ಜಂಗಮ ರೂಪಿಯಾಗಿ, ಸಾಮಾನ್ಯರ ಬದುಕಿನ ದೀಪವಾಗಿ, ಗ್ರಾಮೀಣ ಭಾಗದ ಕೃಷಿಕರಿಗೆ ಪೋಷಕ ಬಂಧುವಾಗಿ, "**ಕರ್ನಾಟಕದ ರತ್ನ**"ವಾಗಿ ಕಂಗೊಳಿಸುತ್ತಿರುವ ದಿವ್ಯ ದಾಸೋಹಿಗೆ ಸಂದ ಪುರಸ್ಕಾರ ಜನಸಾಮಾನ್ಯರಿಗೆ ಸಂದ ಗೌರವ ಎಂದು ನಾನಾದರೂ ಭಾವಿಸುತ್ತೇನೆ.

ಎತ್ತರದ ಭವ್ಯ ನಿಲುವು, ಬದುಕಿನ ಭಾರಕ್ಕೆ ಬಾಗಿದ ಬೆನ್ನು, ನಿರರ್ಗಳವಾಗಿ ಸಾಮಾಜಿಕ ಸಮಸ್ಯೆಗೆ ಆಧ್ಯಾತ್ಮಿಕ ಅರಿವನ್ನು ಕೊಡುವ ವಾಕ್‌ಚಾತುರ್ಯದ ಜೊತೆಗೆ, ಸಮಸ್ಯೆಗೆ ಪರಿಹಾರದ ಸೆಲೆಯನ್ನು ಕಾಣುವ ತವಕದ ಕಣ್ಣಿನ ದೃಷ್ಟಿಗೆ ಅಂತರ್ ದೃಷ್ಟಿಯ ಅನುಭವದ ಹೊಳಪು. ಅನುಭವದ ಪರಿಪಕ್ವತೆಯ ಪರಾಕಾಷ್ಠೆಯ ಪರಿಹಾರವನ್ನು ನೀಡುವ ದಿವ್ಯ ದೃಷ್ಟಿಯ ಚೇತನ ನಮ್ಮೊಂದಿಗಿರುವುದೇ ನಮ್ಮ ಚೈತನ್ಯ. ನೂರರ ಇಳಿವಯಸ್ಸಿನಲ್ಲೂ ಯುವ ಜನಾಂಗವನ್ನು ಮೀರಿಸುವ ಅದಮ್ಯ ಉತ್ಸಾಹ, ಮಧ್ಯಮ ವಯಸ್ಸಿನವರಿಗೂ ಮೇಲುಸಿರು ಬರುವಂತೆ ಆಗುವ ಅವರ ನಡಿಗೆಯ ಓಟಕ್ಕೆ ಸರಿಸಾಟಿಯಾಗದ ಅನುಭವ ಅಗೋಚರದ ಶಕ್ತಿಯ ಪ್ರತಿರೂಪದ ಜೊತೆಗೆ ತೃಪ್ತಿಯ ಜೀವನದ ಮುಪ್ಪಿನ ಮಂದಹಾಸ.

ಭೌತಿಕ ಅನುಭವದ ಸಿರಿತನಕ್ಕೆ ಸಂದ ಕರ್ನಾಟಕ ವಿಶ್ವವಿದ್ಯಾಲಯದ ಡಾಕ್ಟರೇಟ್ ಜೊತೆಗೆ ಮತ್ತೊಂದು ಗರಿ ಕರ್ನಾಟಕದ ಭೌಗೋಳಿಕ ವಿಸ್ತಾರದ "**ಕರ್ನಾಟಕ ರತ್ನ**" ಇಂತಹ ವಿಸ್ತಾರದ ಮುಕುಟಕ್ಕೆ "**ಭಾರತರತ್ನ**" ಪುರಸ್ಕಾರ ಪ್ರಸ್ತುತವಾದದ್ದು ಎನಿಸದೆ ಇರುವುದಿಲ್ಲ. ಮಾನವ ಜನ್ಮದ ಸಾರ್ಥಕತೆಯ ಮಹಾನ್ ಪುರುಷ ಶ್ರೀಗಳವರ ಬದುಕು ಮಾನವ ಕುಲಕ್ಕೆ ಕಳಶಪ್ರಾಯವಾಗಿದೆ ಎಂದರೆ ತಪ್ಪಲ್ಲ. ಇಂತಹ ಸಾರ್ಥಕತೆಯ ನೂರು ವರ್ಷದ ಭಗವಂತನ ಬಳುವಳಿ ಪಡೆದ ಧನ್ಯತೆಯ ಬದುಕು ಶ್ರೀಗಳವರದು.

ನೂರು ವಸಂತಗಳನ್ನು ಕಂಡ ಬದುಕು ಎಷ್ಟು ಸುಂದರ. ಪದರ ಪದರಗಳನ್ನು ಬಿಡಿಸಿದಾಗ ಪ್ಯಾರಾಚೂಟ್‌ನಂತೆ ಹರಡಿದ ಚಾದರ ಎಷ್ಟು ವಿಸ್ತಾರ. ಸುತ್ತಲೂ ಬಾರದ ಮಡಿಸಲೂ ಬಾರದ, ಹರಡಲೂ ಬಾರದ ಬದುಕಿನ ವಿಸ್ತಾರದ ವಿಸ್ತೀರ್ಣ. ಎಣಿಸಲು ಆಗದ, ಎಟುಕಲು ಆಗದ, ಮುಟ್ಟಲು ಆಗದ ಬದುಕಿನ ಎತ್ತರದ ಆಗಸದಿಂದ ಸಮುದ್ರಕ್ಕೆ ಬಿದ್ದ ಮಳೆ ಹನಿಗಳೆಲ್ಲಾ ಸ್ವಾತಿ ಮುತ್ತುಗಳಾಗುವುದಿಲ್ಲ. ಹಾಗೆಯೆ ಭೂಮಿಯ ಮೇಲೆ ಹುಟ್ಟಿದವರೆಲ್ಲಾ ಮಹಾನ್ ವ್ಯಕ್ತಿಗಳಾಗುವುದಿಲ್ಲ.

ಅಧಿಕಾರ, ಅಂತಸ್ತು, ರೂಪು, ಯೌವ್ವನ ಜೀವನದಲ್ಲಿ ತಟಕ್ಕನೆ ಬಂದು ತಟಕ್ಕನೆ ಹೋಗುವಂತಹದ್ದು. ಆದರೆ ಬದುಕಿನ ಹೆಜ್ಜೆಯ ಗುರುತಿನಲ್ಲಿ ನಮ್ಮ ಜೀವನದ ರೀತಿಯನ್ನು ಮೂಡಿಸುವ ನೀತಿ ಮಾತ್ರ ನಮ್ಮ ನೆನಪನ್ನು ಉಳಿಸುವುದು. ಬದುಕಿನಲ್ಲಿ ಬೆಡಗಿದೆ, ಬರಡಿದೆ. ಬೆರಗಿದೆ. ಜೀವನದ ಬರಡನ್ನು ಬೆಡಗಾಗಿಸಿ, ಬೆಡಗನ್ನು ಬೆರಗಾಗಿಸಿದ ಬದುಕು "**ಕರ್ನಾಟಕ ರತ್ನ**"ದ ಪುರಸ್ಕೃತರೂ ಆಗಿರುವ ಡಾ। ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರದು.

ಇಂತಹ ದಿವ್ಯ ಶ್ರೀಗಳವರ ಶತಮಾನೋತ್ಸವದ ಬದುಕಿನ ಬಳ್ಳಿ, ಬಾಳಿಗೆ ಬೆಳ್ಳಿಯ ಬೆಳಕಾಗಿ, ಬಂಗಾರದ ಭದ್ರ ಕವಚವಾಗಿ, ಸ್ವಾತಿ ಮುತ್ತಿನ ಶ್ರೇಷ್ಠತೆಯ ಜೊತೆಗೆ ವಜ್ರ ಕಠೋರತೆಯ ಸ್ಫಟಿಕದ ಸಲಾಕೆಯ ಅಲುಗಿನ ಆಧ್ಯಾತ್ಮಿಕ ಅಸ್ತ್ರವನ್ನಾಗಿಸಿ, ಸಮಾಜವನ್ನು ಸುಧಾರಿಸುವ ಅಂಕುಶವಾಗುವ ಶಕ್ತಿಯನ್ನು ಭಗವಂತ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ದಯಪಾಲಿಸಿ ಪ್ರತಿಯೊಬ್ಬರ ಬದುಕಿನಲ್ಲೂ ದಿವ್ಯ ಶಕ್ತಿಯ ಸಂಚಲವನ್ನು ಮೂಡಿಸುವ ಶಕ್ತಿಯನ್ನು ಕೊಡಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ. □

# ನಡೆದಾಡುವ ದೇವರು ಡಾ॥ ಶ್ರೀ ಶ್ರೀ ಶಿವಕುಮಾರ ಶ್ರೀಗಳು

– ಎ. ಬಾಲಚಂದ್ರ
ಮಾಲೀಕರು, ರಾಜಹನ್ಸ್ ಪ್ರಿಂಟರ್ಸ್,
ರಾಜಾಜಿನಗರ, ಬೆಂಗಳೂರು.

'ಸಿದ್ಧಗಂಗಾ' ಕ್ಷೇತ್ರ ಭಕ್ತಿ ಸಮರ್ಪಣೆಯ ದಿವ್ಯ ಸಾನ್ನಿಧ್ಯ. ಅಲ್ಲಿ ಜಾತಿ–ಮತ–ಪಂಥಗಳಿಲ್ಲ. ಅಲ್ಲಿರುವುದು ಒಂದೇ. ಅಕ್ಷರ–ದಾಸೋಹ.

"ಹಸಿದವನಿಗೆ ಸಿದ್ಧಾಂತವನ್ನು ಬೋಧಿಸುವುದಕ್ಕಿಂತ, ತುತ್ತು ಅನ್ನ ಕೊಟ್ಟು ಹೊಟ್ಟೆ ತುಂಬಿಸು" ಎಂದು ಜಗತ್ತಿನ ದಾರ್ಶನಿಕರು ಹೇಳಿದ್ದಾರೆ. ಪರಮ ಪವಿತ್ರಕ್ಷೇತ್ರ ಸಿದ್ಧಗಂಗೆಯಲ್ಲಿ ಇದು ಅಕ್ಷರಶಃ ಜಾರಿಗೆ ಬಂದಿದೆ. ಅಕ್ಷರ–ಅನ್ನ ದಾಸೋಹ, ಎರಡೂ ಒಟ್ಟೊಟ್ಟಿಗೇ ಇಲ್ಲಿ ನಡೆಯುತ್ತಿದೆ. ಆ ಕಾರಣಕ್ಕಾಗೇ ಇದು ಇಡೀ ಜಗತ್ತಿನ ಗಮನ ಸೆಳೆದಿದೆ. ಇದಕ್ಕೆಲ್ಲ ಕಾರಣರು, ಪ್ರೇರಕಶಕ್ತಿಯಾಗಿ ನೆಲೆ ನಿಂತು ಇಂತಹ ಅಪರೂಪದ ಕಾಯಕ ಯಶಸ್ಸು ಕಾಣುವಂತೆ ನೋಡಿಕೊಳ್ಳುತ್ತಿರುವವರು ಇಲ್ಲಿನ ಮಹಾನ್ ಸಾಧಕ, ವಿರಾಗಿ, ನಡೆದಾಡುವ ದೇವರು ಎಂದೇ ಹೆಸರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು.

ಶ್ರೀಗಳಿಗೆ ನೂರು ವರ್ಷ ತುಂಬಿದೆ. ಈ ವಯಸ್ಸಿನಲ್ಲೂ ಅವರ ಉತ್ಸಾಹ ಯುವಕರೂ ನಾಚುವಂತಿದೆ. ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಒಬ್ಬ ಸಿದ್ಧಪುರುಷರು. ಭಕ್ತರು, ಶಿಷ್ಯ ಕೋಟಿಯ ಪಾಲಿಗೆ ಅವರೇ ದೇವರು. ಲಕ್ಷಾಂತರ ಬಡ ವಿದ್ಯಾರ್ಥಿಗಳಿಗೆ ಮಠದಲ್ಲಿ ಆಶ್ರಯ ನೀಡಿ ಮೂರು ಹೊತ್ತು ಊಟ ಹಾಕಿ, ಉಚಿತವಾಗಿ ವಿದ್ಯಾದಾನ ಮಾಡುವ ಮೂಲಕ ಸಮಾಜದಲ್ಲಿ ಮಾನವೀಯತೆಯನ್ನು ಮೆರೆದ ಮಹಾನ್ ಸಾಧಕ. ಈ ಕಾರಣಕ್ಕಾಗೇ ಅವರು ಭಕ್ತರ ಪಾಲಿಗೆ ಆರಾಧ್ಯ ದೈವವಾಗಿ ಕಾಣುತ್ತಾರೆ.

ಸಾಮಾನ್ಯವಾಗಿ ಮಠಾಧಿಪತಿಗಳೆಂದರೆ, ನಮ್ಮ ಕಣ್ಣ ಮುಂದೆ ಸುಳಿಯುವ ಚಿತ್ರಣವೇ ಬೇರೆಯ ರೀತಿಯದು. ಚಿನ್ನದ ಕಿರೀಟ, ಆಭರಣಗಳನ್ನು ಧರಿಸಿ ಅಡ್ಡ ಪಲ್ಲಕ್ಕಿಗಳಲ್ಲಿ ಕುಳಿತು ಮೆರವಣಿಗೆ ಮಾಡಿಸಿಕೊಳ್ಳುವ, ತಮ್ಮ ಸುತ್ತ ಪ್ರತ್ಯೇಕ ಜಗತ್ತನ್ನು ಸೃಷ್ಟಿಸಿಕೊಂಡು ಡಾಂಭಿಕತೆಯ ಪ್ರದರ್ಶನ ನೀಡುವ ಮಠಾಧಿಪತಿಗಳೂ ನಮ್ಮ ನಡುವೆ ಇದ್ದಾರೆ. ಆದರೆ ಸಿದ್ಧಗಂಗಾ ಶ್ರೀಗಳು ಈ ಎಲ್ಲ ಡಾಂಭಿಕತೆ, ಕಂದಾಚಾರಗಳಿಂದ ದೂರ. ಅವರೊಬ್ಬ ಮಹಾನ್ ಮಾನವತಾವಾದಿ. ಸಿದ್ಧಗಂಗಾ ಮಠದಲ್ಲಿ ಜಾತಿ ಆಚರಣೆಗೆ ಅವಕಾಶವೇ ಇಲ್ಲ. ದೂರದ ಬೀದರ್–ಗುಲ್ಬರ್ಗಾದಿಂದ ಹಿಡಿದು ಕರ್ನಾಟಕದ ಮೂಲೆ ಮೂಲೆಗಳಿಂದಲೂ ಇಲ್ಲಿಗೆ ಬಂದು ಸೇರಿ ವಿದ್ಯೆ ಕಲಿಯುತ್ತಿರುವ, ಕಲಿತಿರುವ ಮಕ್ಕಳು ಇಂದಿಗೂ ನಮಗೆ ಕಾಣಸಿಗುತ್ತಾರೆ. ಹೀಗೆ ಬಂದ ಮಕ್ಕಳು ಆರ್ಥಿಕವಾಗಿ ಶಕ್ತರಲ್ಲದ, ಬಡತನದಿಂದ ಓದು ಮುಂದುವರಿಸಲಾಗದೇ ಕಷ್ಟಕ್ಕೆ ಸಿಕ್ಕಿದವರೇ ಆಗಿರುತ್ತಾರೆ. ಇಂತಹ ಮಕ್ಕಳಿಗಾಗೇ ಶ್ರೀಗಳು ಉಚಿತ ಪ್ರಸಾ ನಿಲಯ, ಶಾಲೆ ನಡೆಸುತ್ತಾರೆ. ಇಲ್ಲಿ ಬಡತನ ಅರ್ಹತೆಯೇ ಹೊರತೂ ಜಾತಿಯಲ್ಲ ಎಂಬುದನ್ನು ಮತ್ತೆ ಮತ್ತೆ ಹೇಳಬೇಕು.

ಸಿದ್ಧಗಂಗಾ ಶ್ರೀಗಳು ಅವರ ಸಾಧನೆಗಳ ಕುರಿತು ಪ್ರಸ್ತಾಪಿಸುವಾಗಲೆಲ್ಲ

*"ಶಿಲೆಯೊಳಗಣ ಪಾವಕದಂತೆ ಉದಕದೊಳಗಣ ಪ್ರತಿಬಿಂಬದಂತೆ ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಶ್ಶಬ್ದದಂತೆ ಗುಹೇಶ್ವರಾ, ನಿಮ್ಮ ಶರಣ ಸಂಬಂಧ"*

ಎಂಬ ಅಲ್ಲಮಪ್ರಭುವಿನ ವಚನ ನೆನಪಾಗುತ್ತದೆ.

ಈ ಚಲನಶೀಲ ಜಗತ್ತಿನಲ್ಲಿ ದೇವರು ಇದ್ದಾನೆ. ಜಗತ್ತಿನ ಯಾವುದೇ ಗುಣ ದೋಷಗಳೂ ಅವನಿಗೆ ಅಂಟುವುದಿಲ್ಲ. ಚಿಕ್ಕದಾದ ಬೀಜದಿಂದ ಬೃಹತ್ ವೃಕ್ಷದಾಗುತ್ತದೆ. ಹಾಗೆ ನೋಡಿದರೆ ಬೀಜದಲ್ಲೆ ವೃಕ್ಷವು ಅಡಗಿದೆ. ಹಾಗೆಯೇ, ಜೀವಾತ್ಮದಲ್ಲಿ ದೇವರು ನೆಲೆಸಿದ್ದಾನೆ. ಹಾಗೆಯೇ ಸಿದ್ಧಗಂಗಾ ಶ್ರೀಗಳು ಕೈಗೊಂಡು ನಡೆಸುತ್ತಿರುವ ಕಾರ್ಯಗಳು ಸಮಾಜೋಪಯೋಗಿ, ಒಂದು ರೀತಿಯಲ್ಲಿ ಜಗತ್ತಿನ ಅಂಧಕಾರವನ್ನು ನೀಗಿಸುವ ಅಪರೂಪದ ಕಾಯಕದಲ್ಲಿ ಅವರು ತೊಡಗಿದ್ದಾರೆ. ಇಲ್ಲಿ ಶ್ರೀಗಳು ಲೌಕಿಕಕ್ಕೆ ಅಂಟಿಕೊಳ್ಳದೇ ನಡೆದುಕೊಳ್ಳುತ್ತಿದ್ದಾರೆ. ಶ್ರೀಗಳ ದೃಷ್ಟಿಯಲ್ಲಿ ಬಡವನ ಉದ್ಧಾರವೇ ದೇವರ ಸೇವೆ. "ಮನುಷ್ಯರಲ್ಲಿ ಮಕ್ಕಳಲ್ಲಿ ಭಗವಂತನನ್ನು ಕಾಣು". ಎಂಬ ತತ್ತ್ವಕ್ಕೆ ಅವರು ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ. ಶ್ರೀಗಳ ಕೈಂಕರ್ಯವನ್ನೇ ಗಮನಿಸಿದರೆ ೧೨ನೇ ಶತಮಾನದಲ್ಲಿ ಬಸವಣ್ಣನವರು ನಡೆಸಿದ ವಿಚಾರ ಕ್ರಾಂತಿ ಕಣ್ಣ ಮುಂದೆ ಬರುತ್ತದೆ. ವಚನಕಾರರು ಹೇಳಿದ್ದನ್ನೇ ಶ್ರೀಗಳು





ಕೃತಿಯಲ್ಲಿ ಮಾಡಿ ತೋರಿಸಿದ್ದಾರೆ. ಅಂದ ಮೇಲೆ ಅವರು ನಡೆದಾಡುವ ದೇವರೂ ಹೌದು. ಆಧುನಿಕ ಬಸವಣ್ಣ ಎಂಬುದೂ ಕೂಡ ಅಷ್ಟೆ ಸತ್ಯ.

ಈವತ್ತು ಒಂದಂಶವನ್ನು ನಾವೆಲ್ಲರೂ ನೆನೆಯಬೇಕು. ಸಿದ್ಧಗಂಗಾ ಮಠ, ಶ್ರೀಗಳು ಆಸಕ್ತಿವಹಿಸದೇ ಹೋಗಿದ್ದರೆ ನಾಡಿನ ಹಳ್ಳಿಗಳ ಮಕ್ಕಳಿಗೆ ವಿದ್ಯೆ ಕನಸಾಗಿಯೇ ಉಳಿದು ಬಿಡುತ್ತಿತ್ತು. ಹಾಗೆ ನೋಡಿದರೆ ೧೨ನೇ ಶತಮಾನದಲ್ಲಿ ನಡೆದ ಕ್ರಾಂತಿಯು ಆರ್ಥಿಕ, ರಾಜಕೀಯ ಶೈಕ್ಷಣಿಕ ಕ್ಷೇತ್ರದ ಮೇಲೂ ಪ್ರಭಾವ ಬೀರಿತ್ತು. ಅದೇ ಹಾದಿಯಲ್ಲಿ ಮುಂದುವರಿದು ಹೇಳಬಹುದಾದರೆ – ಸಿದ್ಧಗಂಗಾ ಕ್ಷೇತ್ರವು ನಡೆಸುತ್ತಿರುವ ಶಾಲೆ, ಕಾಲೇಜುಗಳು, ವಿಚಾರ ಸಂಕೀರಣಗಳು, ಗ್ರಾಮೀಣ ಪ್ರದೇಶಗಳಲ್ಲಿ ನಡೆಸುತ್ತಿರುವ ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಗಳು ಸೇರಿದಂತೆ ಇನ್ನಿತರ ಕಾರ್ಯಕ್ರಮಗಳು ಸಮಾಜಮುಖಿಯಾಗಿದೆಯಷ್ಟೆ ಅಲ್ಲ ಒಂದು ಸಂಸ್ಕೃತಿಯ ರಕ್ಷಣೆಯೂ ಆಗಿದೆ. ಸಮಾಜವನ್ನು ಕಲ್ಯಾಣಮುಖಿಯಾಗಿಸುವುದು ಸಿದ್ಧಗಂಗಾ ಶ್ರೀಗಳ ಚಿಂತನೆ. ಈ ಕಾರಣಕ್ಕಾಗೇ ಶ್ರೀಗಳು ಉಳಿದೆಲ್ಲದವರಿಗಿಂತ ವಿಭಿನ್ನವಾಗಿ, ಆದರ್ಶವಾಗಿ ಕಾಣುತ್ತಾರೆ.

ಡಾ॥ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಶ್ರೀಮಠದ ಜವಾಬ್ದಾರಿ ವಹಿಸಿಕೊಂಡಾಗ ಅವರಿಗೆ ಅವರ ಗುರುಗಳಿಂದ ಬಂದಿದ್ದು ಒಂದು ರುದ್ರಾಕ್ಷಿ ಸರ ಮತ್ತೊಂದು ಜೋಳಿಗೆ, ಇದರ ಜೊತೆಗೇ ಕಣ್ಣಿಗೆ ಕಾಣದ ತಪಃಶಕ್ತಿ. ಇವಿಷ್ಟರಿಂದಲೇ ಶ್ರೀಗಳು ಮಠವನ್ನು ಬೆಳೆಸಿ ರಾಷ್ಟ್ರಮಟ್ಟದಲ್ಲಿ ಅದರ ಖ್ಯಾತಿ ಬೆಳಗುವಂತೆ ನೋಡಿಕೊಂಡರು.

ಡಾ॥ ಪರಮಪೂಜ್ಯ ಶಿವಕುಮಾರ ಸ್ವಾಮಿಗಳದ್ದು ಇಂದಿಗೂ ಶಿಸ್ತುಬದ್ಧ ದಿನಚರಿ, ಹೊತ್ತು ಹುಟ್ಟುವ ಮೊದಲೇ ಎದ್ದು ಶೌಚಾದಿಗಳನ್ನು ಮುಗಿಸಿ, ಯೋಗ ಸಾಧನೆ ಮಾಡಿ ಬಂದು ಪೂಜೆಗೆ ಕುಳಿತರೆಂದರೆ ಅಲ್ಲೊಂದು ಆಧ್ಯಾತ್ಮದ ವಾತಾವರಣ, ದೈವಕಳೆ ನಿರ್ಮಾಣವಾಗಿ ಬಿಡುತ್ತದೆ. ಇಂದಿಗೂ ಶ್ರೀಗಳು ಮಠದ ಮಕ್ಕಳ ದೈನಂದಿನ ಪ್ರಾರ್ಥನೆಗೆ ಹಾಜರಾಗುತ್ತಾರೆ. ಕಚೇರಿಗೆ ಬಂದು ದೈನಂದಿನ ಕಾಗದ ಪತ್ರಗಳನ್ನು ನೋಡಿ ಉತ್ತರಿಸಬೇಕಾದವುಗಳಿಗೆ ಉತ್ತರಿಸಿ, ಉಳಿದವುಗಳ ವಿಚಾರದಲ್ಲಿ ಅಗತ್ಯ ಕ್ರಮ ಕೈಗೊಳ್ಳುವಂತೆ ಸಿಬ್ಬಂದಿಗೆ ಸೂಚಿಸಿ, ಆ ಕಾರ್ಯ ಪೂರ್ಣಗೊಂಡ ನಂತರವೇ ಕಚೇರಿಯಿಂದ ನಿರ್ಗಮಿಸುತ್ತಾರೆ. ಪ್ರತಿಯೊಂದು ಕ್ರಮಬದ್ಧ, ಪ್ರತಿಯೊಂದೂ ಶಿಸ್ತುಬದ್ಧ. ಅದೇ ಮಠದ ಕೀರ್ತಿಯನ್ನು ಜಗದಗಲಕ್ಕೆ ಮುಗಿಲೆತ್ತರಕ್ಕೆ ಬೆಳಗುವಂತೆ ಮಾಡಿದೆ.

ರಾಜಕಾರಣದ ಸೊಂಕಿನಿಂದ ಶ್ರೀಮಠ ಎಂದೆಂದಿಗೂ ದೂರ. ಶ್ರೀಗಳ ಬಳಿಗೆ ವಿವಿಧ ಪಕ್ಷಗಳ ರಾಜಕೀಯ ನಾಯಕರು ಬಂದು ಆಶೀರ್ವಾದ ಬೇಡುತ್ತಾರೆ. ಆದರೆ ಶ್ರೀಗಳದ್ದು ನಿರ್ಲಿಪ್ತ ಸ್ವಭಾವ *"ನಿಮಗೆ ಒಳ್ಳೆಯದಾಗಲಿ, ದೇವರು ನಿಮಗೆ ಒದಗಿರುವ ಅವಕಾಶವನ್ನು ಜನತೆಯ ಕ್ಷೇಮಕ್ಕಾಗಿ ಬಳಸಿ, ಜನತೆಯನ್ನೇ ದೇವರೆಂದು ಭಾವಿಸಿ"* ಎಂಬುದು ಅವರಿಂದ ಬರುವ ಮಾತುಗಳು.

ಚೈತನ್ಯದ ಚಿಲುಮೆಯಾದ ಶ್ರೀಗಳು ತಮ್ಮ ಬಳಿ ಬಂದ ಹಳ್ಳಿಗರ ಅನೇಕ ಕಷ್ಟಗಳಿಗೆ ಪರಿಹಾರ ಕಲ್ಪಿಸಿದ್ದೂ ಇದೆ. ಈ ಕಾರಣಕ್ಕಾಗೇ ಜನ ಅವರನ್ನು **"ನಡೆದಾಡುವ ದೇವರು"** ಎಂದು ಕರೆಯುತ್ತಾರೆ. ಅದು ನಿಜವೂ ಕೂಡ. ❑

## ಶ್ರೀವಾಣಿ

ಶಿಕ್ಷಕ ಎಲ್ಲಕ್ಕೂ ಮೊದಲು ಚಾರಿತ್ರ್ಯ ಶುದ್ಧಿಯನ್ನು ಕಾಪಾಡಿಕೊಳ್ಳ ಬೇಕು. ಆಚಾರ್ಯ ಪದವಿ ಸದಾ ಜಾಗೃತವಾಗಿರುವಂಥದ್ದು. ಸಮಾಜ ಅದರಲ್ಲೂ ತನ್ನ ಬಳಿಗೆ ಕಲಿಯಲು ಬರುವ ವಿದ್ಯಾರ್ಥಿಗಳು ತೆರೆದ ಕಣ್ಣಿನಿಂದ ಶಿಕ್ಷಕನನ್ನು ನೋಡುತ್ತಿರುತ್ತವೆ. ಅಧ್ಯಯನ ಶೀಲನಾಗದವ ಸಮರ್ಥ ಶಿಕ್ಷಕನೆನಿಸಲಾರ. ಅವನೊಂದು ಚಲಿಸುವ ಜ್ಞಾನಭಂಡಾರ. ಧರ್ಮದ ತಳಹದಿಯ ಮೇಲೆ ಕಟ್ಟಲ್ಪಡುವ ನಾಗರಿಕತೆಸುಸಂಸ್ಕೃತ ವಾದದ್ದು. ನಮ್ಮ ಸಮಸ್ತ ಕ್ರಿಯಾಮುಖದಲ್ಲೂ ಧರ್ಮಬುದ್ಧಿ ಬರದಿದ್ದರೆ ನಾವು ಎಷ್ಟೇ ನಾಗರಿಕರೆನಿಸಿದರೂ ಸುಸಂಸ್ಕೃತರೆನಿಸ ಲಾರೆವು. ನಮಗೆ ಗಳಿಕೆ ಬಳಕೆ ಎರಡರ ಅರ್ಥವು ಆಗಬೇಕು. ಸಂಪಾದಿಸುವುದನ್ನೆಲ್ಲ ಧರ್ಮಬುದ್ಧಿಯಿಂದಲೇ ಅರಿತು ಬಳಕೆಮಾಡಬೇಕು. ಇದನ್ನು ಶರಣರು "ದಾಸೋಹಂ ಭಾವ" ವೆಂದು ಕರೆದಿದ್ದಾರೆ. ಪಾಪದಿಂದ ಗಳಿಸಿದ ಅರ್ಥ ಪ್ರಾಯಶ್ಚಿತಕ್ಕೆ ವ್ಯಯವಾಗುತ್ತದೆಂಬುದರ ಅರಿವು ಎಲ್ಲರಿಗೂ ಮೂಡಿಬರಬೇಕು. ಪಾಪಬುದ್ಧಿಯಿಂದ ಏನನ್ನೂ ಸಂಗ್ರಹಿಸಬಾರದು.

# The Shivayogi of Sree Siddaganga Monastry

**–T.S. Ramachandra Rao**

***This world is Lord's workshop***
***Life, lived worthily here***
***makes it worthy there***
***To be worthless here implies***
***it to be worthless there,***
***Kudala Sangama, my Lord!***

These mellifluous words of Basavanna, the devotee of Lord Shiva come sailing on the evening breeze, elevating the spirits of the listeners gathered around. It is a prayer coming from not one mouth, but from thousands of mouths at the same time in unison. A group of visitors and others are standing around engrossed in listening to the devotees who are praying. It does not happen in one day or two days. It is every day's occurrence both in the morning and in the evening, tnat nas become a part and parcel of existence there. Prayers are offered there to the creator. Who are they who pray regularly? They are thousands of students studying there.

Just 62 K.M.s from Bangalore and 6 K.M.s from Tumkur Town, there is this holy place Sree Siddaganga, situated at the foot of a small hillock. The National High way No.4, known as B.H. Road passes nearby. The congregation described here has become a part of the daily activities at the mutt, .whose moving spirit is His Holiness, Karnataka Rathna, Dr. Shri Shri Shivakumara Swamiji. It is a great centre of learning which is akin to the seats of learning in our country in the past, known as *'The Gurukulas'*. We have heard about the prayer meetings held by Mahathma Gandhiji which were for the general public. Here, at the mutt, we find the prayers being conducted solemnly by the students and the teachers in the auspicious presence of His Holiness. It is virtuous to be present and participate in the prayers both in the morning and In the evening and the efforts made by Sree Swamiji in showing the right path and in shaping the future generation as worthy citizens. These prayer meetings have become the finest part of all the activities that take place everyday at the mutt especially these days.

We have heard about the hermitages in our country in the past, where great and learned hermits lived along with the disciples, who used to learn from their preceptors and thus developed their personality. There was moral uprightness in what the disciples learnt in the ancient gurukulas. The history of India of the bygone days is full of such incidents that prove the importance of the gurukula institutions and their system of education. Besides, there are the examples of the famous universities of *Nalanda* and *Takshashila* where more attention was given to the





development of the alround personality of the pupils. In all those institutions importance was given to the refinement and preservation of Indian culture. Each of these places of learning had left its own impression on the learners. There was a cultural relationship between the teacher and the pupil. The former taught wholeheartedly, and the latter learnt. with modesty and became an enlightened person gaining scholarship. The devotion and the adoration of the disciple *Ekalavya* shown to his mentor *Dronacharya* and offering his own thumb to the latter as fee, is only symbolic. Just as one of the Vaishnava devotees, a servant of Hari, the God opines, *«Unless one became servile* to *his mentor, there will be no salvation".*

Sree Siddaganga Mutt has laid a very strong foundation based on the consistency of an ancient culture and the progressive thoughts and changing trends of modern times, which is essential to impart good education. The originator of the heritage of the gurus at Sree Siddaganga Mutt was Sree Gosala Siddheswara Swamiji, who came here nearly six centuries ago. He was pleased with the peaceful- and calm atmosphere here and stayed in one of the caves and carried out his meditation. A number of disciples also had follwed him. It is said that he was responsible for bringing out a spring of clean water for them. Even to this day, the water springs out continuously and is being worshipeed as Sree Siddaganga Devi, The Goddess.

Among the holy men, who came after Sree Gosala Siddeshwara Swamiji, Sree Thontada Siddalinga Swamiji was the one who became famous. He travelled in many parts of Karnataka along with his disciples preaching *'Sharana Dharma'* as one of the votaries of Lord Shiva. He came ultimately and settled at Kaggere near Yedeyur of Kunigal Taluk in Tumkur District. The place has become very famous even to this day on account of Yedeyur Sree Siddalingeshwara swamy, the presiding deity.

Sree Atavi Swamiji who occupied the seat of the swamijis at the mutt was responsible for the worship and other services there, meant for the devotees and others who came there every day. The fire that was lit there in the mutt, is burning continuously even to this day to serve every one. The swamiji observed radiance in the face of Sree Uddana Shivayogi Swamiji and nominated him as his heir to succeed. The young swamiji did not disappoint him. The *Jathra'* or the fair that he started began growing year after year. Today it has become an event for educating people and not a mere occasion for enjoyment. Both arts and science have combined judiciously to impart an insight into the changes that are taking place everyday. It has certainly made the fair at Sree Siddaganga, highly educative year after year.

Sree Uddana Shivayogi Swamiji had nominated Sree Marularadhya Swamy as his heir, who met with an untimely death in 1930. It was necessary to find another suitable person to succeed him. It was then that Sree Shivanna, a youth_ of good caliber, whom he knew well for a long time,

came to his mind. The boy was the youngest son of Patel Honnappa and Smt. Gangamma, residing at the village Veerapura of Magadi Taluk, in district Bangalore. He was a student then studying in the Central college, Bangalore for his B.A. in 1931. He was selected as the heir to the seat meant for a person of non attachment, uninvolved in earthly life and indifferent to worldly matters. *rVirakthashrama' as it* is called).

Sree Shivanna was renamed Sree Shivakumara Swamiji and succeeded to the seat in the Mutt on 11 th of January 1941, after Sree Uddana Shivayogi Swamiji passed away.

*Sree Siddaganga Mutt* has progressed a lot in serving society under the guidance of *Sree Shivakumara Swamiji.* This progress is certainly not slow. It is being done in leaps and bounds under his stewardship. There is all-round development. The routine, that the centenarian follows every day is exemplary. It is really surprising to know how he manages everything instructing others to do likewise with his own example. There are nearly ten thousand students at the Mutt studying in various institutions, partaking the same common food and doing common chores. They live in unison, though they come from different family backgrounds and different places.

*Sree Swamiji* looks after not only the students, but also he listens to the problems of those who come to him seeking his succour when problems arose. *Swamiji* is found consoling them and taking care of them. The kind of socialism the sharanas *(Devotees of Lord Shiva)* profess is really practiced in the Mutt. The great ***Basavanna has said, -***

***"Ask not who he is, Who he is, And who he is, Reckon him, he is Thine, he is Thine and Thine Lord Kudala Sangama, count him the son in Thy abode"***

If anyone wants to know the true meaning of socialism, equality, peace and tranquility, he has to come to *Sree Siddaganga Mutt* where the activities are being carried out under the guidance of *Sree Shivakumara Swamiji.* The prayers conducted in his presence and the words of wisdom that emanate from him, go a long way in building the personality of the listeners.

The contribution of the Mutt, especially *Sree Swamiji* in the field of education is commendable. Sree Siddaganga Mutt is in itself a *'UNIVERSITY* providing education to the children coming from every corner of the state and even from other places in the field of Pre-Primary, Primary, High School, Pre-University, Degree and Post graduate courses. All these come under general education category. In addition, there are facilities available to undertake studies in technical, educational, nursing, physical education, as well as educating the blind and physically handicapped children.

His Holiness, Karnataka Rathna, Sree. Sree. Dr. Shivakumara Swamiji, the centenarian, who is known for his promptness and discipline in everything is an ascetic par excellence.







# ಮಣ್ಣನ್ನು ಹೊನ್ನಾಗಿಸಿದ ತಪೋಮೂರ್ತಿ

- ಬಿ. ಪರಮೇಶ್ವರಪ್ಪ
ನಿವೃತ್ತ ಕಾರ್ಯಪಾಲಿಕಾ ಅಭಿಯಂತರರು
ಬಾಸೂರು.

೧೨ನೇ ಶತಮಾನದಲ್ಲಿ ಬಸವಾದಿ ಶರಣರು, ತಮ್ಮ ಕಾಯಕ ದಾಸೋಹದ ಮೂಲಕ ಕಲ್ಯಾಣ ರಾಜ್ಯಕ್ಕೆ ಕಲ್ಯಾಣದ ಸ್ವರೂಪ ತಂದು ಕೊಟ್ಟರು. ಆ ಶರಣರು ಮಣ್ಣನ್ನು ಹೊನ್ನೆಂದರು. ಅವರಲ್ಲಿ ಒಕ್ಕಲಿಗ ಮಾರೇಗೌಡನೆಂಬ ಒಬ್ಬ ಶರಣ. ಕಾಯ ಕಷ್ಟಮಾಡಿ ತನ್ನ ಹೊಲವನ್ನು ಸುಂದರ ತೋಟವನ್ನಾಗಿ ಮಾಡಿ ಆನಂದಪಟ್ಟಿದ್ದ, ದಾರಿಯ ಪಕ್ಕದ ತೋಟ. ಹಾದಿಯಲ್ಲಿ ಹೋಗಿ ಬರುವ ಜನರಿಗೆ ಹಾಲನ್ನು ಕೊಟ್ಟು, ಹಣ್ಣನ್ನು ಕೊಟ್ಟು ಅವರು ಹಾಲು ಕುಡಿದು ಹಣ್ಣನ್ನು ತಿಂದಾಗ ಅವರ ಮುಖದಲ್ಲಿ ತೃಪ್ತಿ ಕಂಡು ಇವನು ಸಂತಸಪಟ್ಟಿದ್ದ. ಅವರು ತೃಪ್ತಿಪಟ್ಟರೆ ಇವನಿಗೆ ಸಂತಸ. ಎಂತಹ ಮನೋಭಾವ. ಒಕ್ಕಲುತನ ದಾಸೋಹ ಶರಣರ ನಿಲುವು.

ಒಂದು ದಿವಸ ಒಬ್ಬ ಸನ್ಯಾಸಿ ಬಂದರು ಎಂದಿನಂತೆ ಅವರಿಗೆ ಹಾಲು ಹಣ್ಣನ್ನಿತ್ತು ತೃಪ್ತಿಗೊಳಿಸಿದ. ಆಗ ಸನ್ಯಾಸಿ ತನ್ನ ಜೇಬಿನಿಂದ ಒಂದು ಕಲ್ಲನು ತೆಗೆದು ಇದು ಸಾಮಾನ್ಯ ಕಲ್ಲಲ್ಲ! ಪುರುಷ ಕಲ್ಲು, ಕಬ್ಬಿಣಕ್ಕೆ ಮುಟ್ಟಿಸಿದರೆ ಬಂಗಾರ ಆಗುತ್ತದೆ. ತೆಗೆದುಕೋ ಎಂದು ಮಾರೇಗೌಡನಿಗೆ ಕೊಡಲು ಹೋದರು. ಆಗ ಮಾರೇಗೌಡ ಹೇಳಿದ, ಇದನ್ನು ತೆಗೆದಕೊಂಡು ನಾನೇನು ಮಾಡಲಿ ಸ್ವಾಮಿ ಎಂದ.

ಆಗ ಸನ್ಯಾಸಿಯು ಅಲ್ಲ ಹಾದಿಯಲ್ಲಿ ಹೋಗುವ ಜನರಿಗೆ ತೃಪ್ತಿಪಡಿಸುವ ನಿನ್ನ ಜೀವನ ನೋಡಿ ನಮಗೆ ಆನಂದವಾಗಿದೆ. ಇದರಿಂದ ಕಬ್ಬಿಣವನ್ನು ಬಂಗಾರ ಮಾಡಬಹುದು, ಇದಕ್ಕೆ ಅದ್ಭುತ ಶಕ್ತಿಯಿದೆ. ಎಷ್ಟೊಂದು ಸಂಪತ್ತುಗಳಿಸಬಹುದು. ತೆಗೆದುಕೋ ಎಂದರು. ಆಗ ಮಾರೇಗೌಡ ಸನ್ಯಾಸಿ ಕುರಿತು, ಮಹಾನುಭಾವರೇ ಇದರ ಅವಶ್ಯಕತೆ! ನನಗಿಲ್ಲ ಎಂದನು. ಸನ್ಯಾಸಿಯು ಆಶ್ಚರ್ಯದಿಂದ ಏಕೆ ಬೇಡ ಎಂದರು. ಅದಕ್ಕೆ ಮಾರೇಗೌಡ, ಆ ಕಲ್ಲು ಮಾತ್ರ ಪರುಷವೇ? ಸ್ವಾಮಿ ಈ ಭೂಮಂಡಲದ ಮೇಲೆ ಪ್ರತಿಯೊಂದು ಪ್ರಾಣಿಯು ಕಲ್ಯಾಣಕ್ಕಾಗಿ ಭಗವಂತ ಸೃಷ್ಟಿಸಿರುವುದೆಲ್ಲವೂ ಪರುಷವಲ್ಲವೆ? ಸ್ವಾಮಿ ಎಂದನು. ನಾನು ಮೊದಲು ಧಾನ್ಯವನ್ನು, ಧಾನ್ಯವನ್ನಾಗಿ ನೋಡುತ್ತಿದ್ದೆ. ಹಣ್ಣನ್ನು ಹಣ್ಣೆಂದೇ ನೋಡುತ್ತಿದ್ದೆ, ಈಗ ಕಾಳಿನ ಮಧ್ಯೆ ಮುತ್ತು ರತ್ನಗಳನ್ನು ನೋಡಬಲ್ಲೆ. ಹಣ್ಣಿನ ಒಳಗೆ ಅಮೃತವನ್ನು ಕಾಣಬಲ್ಲೆ. ಈ ಕಣ್ಣುಗಳೇ ಪರುಷವಾಗಿವೆ. ಈ ಪರುಷ ದೃಷ್ಟಿ ಕರುಣಿಸಿದವರು ಬಸವಣ್ಣನವರು. ದೃಷ್ಟಿ ಪರುಷವಾದ ಮೇಲೆ ಈ ಕಲ್ಲನ್ನು ತೆಗೆದುಕೊಂಡು ಏನು ಮಾಡಲಿ! ಸ್ವಾಮಿ ಎಂದ. ಮಾರೇಗೌಡನದು ಎಂತಹ ಸಾಧನೆ. ಇದು ದೃಷ್ಟಿಪರುಷ. ಇದು ಶರಣರ ದೃಷ್ಟಿಕೋನ. ಮಾರೇಗೌಡ ಮುಂದುವರಿದು ಹೇಳಿದ. ಏನು ಸ್ವಾಮಿ! ಆ ಕಲ್ಲು ಮಾತ್ರ ಪರುಷವೆ? ಈ ಭೂಮಿಯ ಮೇಲೆ ಭಗವಂತನ ಸೃಷ್ಟಿಸಿರುವುದೆಲ್ಲವು ಪುರುಷವಲ್ಲವೇನು? ಎಲ್ಲೆಡೆ ಸೌಂದರ್ಯ ತುಂಬಿರುವ ನಿಸರ್ಗವೆಲ್ಲವು ಸಿರಿಸಂಪತ್ತಲ್ಲವೇನು? ಬರಿದಾದ ಆಕಾಶದಿಂದ ಸುರಿವ ಮಳೆ, ಹರಿವ ನದಿ, ತುಂಬಿ ಸಾಗರ, ಬೆಳಗುವ ನಕ್ಷತ್ರಗಳು, ಆಕಾಶವನ್ನು ಚುಂಬಿಸುವಂತಹ ಪರ್ವತಗಳು, ಬೆಳದ ವನಸಿರಿ, ನಳನಳಿಸುವ ಪೈರು, ಸಾವಿರ, ಸಾವಿರ ಮಧುರ ಹಣ್ಣನು ಕೊಡುವ ಮರಗಳು. ಇವೆಲ್ಲಾ ಸಿರಿಸಂಪತ್ತಲ್ಲವೇನು. ಒಂದು ಕಾಳನ್ನು ಹಾಕಿದರೆ ಸಾವಿರ ಲಕ್ಷವಾಗಿಸುವ ಭವ್ಯಭೂಮಿ, ಕಾವುಕೊಡುವ ಸೂರ್ಯ ನಮ್ಮನ್ನು ಜೀವಂತವಾಗಿರಿಸುವ ಪ್ರಾಣವಾಯು, ಇವೆಲ್ಲವು ಪರುಷವಲ್ಲವೇನು? ಇವೆಲ್ಲಾ ಹೊನ್ನಲ್ಲವೇನು. ಹೊನ್ನು ಮಾತ್ರ ಹೊನ್ನೇ ಹೇಳಿ ಸ್ವಾಮಿ! ಎಂದನು. ಸನ್ಯಾಸಿ ಮೂಕವಿಕಿಸ್ಮಿತನಾಗಿ ಅಬ್ಬಾ! ಎಂತಹ ದೃಷ್ಟಿ, ಒಬ್ಬ ಸಾಮಾನ್ಯ ಒಕ್ಕಲಿಗನ ದೃಷ್ಟಿಕೋನವೆ ಹೀಗಿರುವಾಗ, ಇವನಿಗೆ ಈ ದೃಷ್ಟಿಕರುಣಿಸಿದ ಆ ಬಸವಣ್ಣ ಹೇಗಿರಬೇಕೆಂದು ಮನದಲ್ಲೇ ವಂದಿಸಿದ. ಮಾರೇಗೌಡ ಮುಂದುವರಿದು ಮಹಾನುಭಾವರೇ! ಈ ಪರುಷಮಣಿ ತಮಗೆ ಇರಲಿ, ನನಗೆ ತಮ್ಮಂತವರನ್ನು ಕೂರಿಸಿ, ಉಣಿಸುವ ಹೃದಯ ಸದಾ ಇರಲೆಂದು ಹರಸಿ - ಅದಕ್ಕಿಂತ ಮಿಗಿಲಾದುದು ನನಗೆ ಮತ್ತೇನು ಬೇಕಾ ಎಂದ. ಎಂತಹ ತೃಪ್ತಿ ಮನೋಭಾವ. ಇಂತಹ ಅವಸ್ಥೆ ಪಡೆದವರೇ ಶರಣರು. ಅಂತರಿಕ ಸಂಪತ್ತನ್ನು ಪಡೆದವರೇ

ಶರಣರು. ಭೌತಿಕ ಸಂಪತ್ತು ಬೇರೆ, ಹೃದಯ ಸಂಪತ್ತೇ ಬೇರೆ. ಇವರು ಎಂತಹ ಸಂದರ್ಭದಲ್ಲಿಯೂ ತಾ ಸಿರಿವಂತರೆಂದೇ ಭಾವಿಸುತ್ತಾರೆ. ಮನ ತುಂಬಿದವರೇ ಶರಣರು. ಬಸವಣ್ಣನವರು ಒಕ್ಕಲಿಗ ಮಾರೇಗೌಡನಂತಹ ಲಕ್ಷಾಂತರ ಶರಣರನ್ನ ಸೃಷ್ಟಿ ಮಾಡಿದರು.

ಇದು ೧೨ನೇ ಶತಮಾನಕ್ಕೆ ಮಾತ್ರ ಸೀಮಿತವಾಗಲಿಲ್ಲ. ಇಂದಿನವರೆವಿಗೂ ಕೂಡ ಅಸಂಖ್ಯಾತ ಶರಣರು, ಶಿವಯೋಗಿಗಳು ಈ ಮಹಾನ್ ತತ್ತ್ವವನ್ನು ಒಪ್ಪಿ, ಅಪ್ಪಿಕೊಂಡು, ಆ ಪರಂಪರೆಯನ್ನು ನಡೆದು ಅವುಗಳಿಗೆ ಮೌಲ್ಯತಂದು ಕೊಟ್ಟಿದ್ದಾರೆ. ಈ ಮನೋಭೂಮಿಕೆಯಲ್ಲಿ ಬದುಕುವರೇ ದಾಸೋಹಿಗಳು. ಈ ಸಾಲಿನಲ್ಲಿ ನಮ್ಮ ಮುಂದೆ ಈಗ ಕಾಣುವವರು. ಸಿದ್ಧಗಂಗೆಯ ಶತಾಯುಷಿ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ತಿರಿದುತಂದು ಕರೆದು ಕೂಡಿಸಿ ಉಣಿಸಿ ಸಂತಸಪಡುವುದೇ ಇವರ ನಿಲುವು. ಎರಡು ಕೈಗಳು ನಿತ್ಯ ಸಾವಿರಾರು ಒಡಲನ್ನು ತುಂಬಿಸುವುದು ಪರುಷ ಅಲ್ಲವೇನು! ಇದು ಅದ್ಭುತ ಅಲ್ಲವೇನು.

ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಅಧಿಕಾರವಹಿಸಿಕೊಂಡಾಗ ಕೇವಲ ಅರವತ್ತು ವಿದ್ಯಾರ್ಥಿಗಳಿದ್ದರು. ಈಗ ಒಂಬತ್ತು ಸಾವಿರ ವಿದ್ಯಾರ್ಥಿಗಳ ಒಡಲು ತುಂಬಿಸಿ ತೃಪ್ತಿಪಡಿಸುತ್ತಿರುವುದು ಅದ್ಭುತ ಅಲ್ಲವೇನು? ಕೇವಲ ಒಬ್ಬರು ಪ್ರತಿವರ್ಷ ಸಾವಿರಾರು ವಿದ್ಯಾರ್ಥಿಗಳಿಗೆ ಸಂಸ್ಕಾರ ಕೊಟ್ಟು, ಸುಸಂಸ್ಕೃತ ಪ್ರಜೆಗಳನ್ನು ನಾಡಿಗೆ ನೀಡುತ್ತಿರುವುದು ಆಶ್ಚರ್ಯವಲ್ಲವೇನು? ಅದ್ಭುತ ಅಲ್ಲವೇನು? ಕೇವಲ ನಾಲ್ಕಾರು ಕಟ್ಟಡಗಳಿದ್ದ ಶ್ರೀಮಠ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಅಧಿಕಾರಾವಧಿಯಲ್ಲಿ ಎಂಬತ್ತಕ್ಕೂ ಹೆಚ್ಚು ಕಟ್ಟಡಗಳು ನಿರ್ಮಾಣವಾಗಿವೆ.

ಕೇವಲ ಒಂದು ಕೂಲಿಮಠವಿತ್ತು. ಈಗ ನೂರ ಇಪ್ಪತ್ತಕ್ಕೂ ಹೆಚ್ಚು, ಶಾಲಾ ಕಾಲೇಜುಗಳನ್ನು ಹೊಂದಿರುವುದು, ಈ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಎರಡು ಸಾವಿರಕ್ಕೂ ಹೆಚ್ಚು ನೌಕರರ ಜೀವನಾಡಿಯಾಗಿ ಸಂಸ್ಥೆ ನಡೆಯುತ್ತಿರುವುದು, ಈ ಪ್ರಗತಿಗೆ ಕಾರಣರಾಗಿರುವ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಕೇವಲ ಒಬ್ಬ ವ್ಯಕ್ತಿಯಾಗಿ ಅಲ್ಲ. ಒಂದು ಶಕ್ತಿಯಾಗಿ ಇದೆಲ್ಲವನ್ನು ಕಾರ್ಯರೂಪಿಕ್ಕೆ ತಂದಿರುವುದು ಅದ್ಭುತ ಅಲ್ಲವೇನು? ಪರುಷ ಅಲ್ಲವೇನು?

ಈ ಸಾಧನೆಯನು ಸಾಮಾನ್ಯರು ಗುರುತಿಸುವುದು ಸಹಜ. ವಿವಿಧ ರಂಗಗಳಲ್ಲಿರುವವರು ಗುರುತಿಸುವುದು ಸಾಮಾನ್ಯ. ಆದರೆ ಗುರುಪೀಠದ ಜಗದ್ಗುರುಗಳು ಗುರುತಿಸಿ ಪ್ರಶಂಸಿಸುವುದು ವಿಶೇಷ. ಪಂಚಪೀಠದ ಜಗದ್ಗುರುಗಳಲ್ಲಿ ಒಬ್ಬರಾದ ಕಾಶಿಜ್ಞಾನಪೀಠದ ಲಿಂಗೈಕ್ಯ ವಿಶ್ವೇಶ್ವರ ಶಿವಾಚಾರ್ಯ ಜಗದ್ಗುರುಗಳವರು ೦೯–೧೧–೧೯೮೭ರಂದು. ತುಮಕೂರಿನಲ್ಲಿ ನಡೆದ ಪಂಚಪೀಠಾಧ್ಯಕ್ಷರ ಧಾರ್ಮಿಕ ಕಾರ್ಯಕ್ರಮದಲ್ಲಿ ಸಿದ್ಧಗಂಗೆಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಅದ್ಭುತ ಸಾಧನೆಯನ್ನು ಕುರಿತು ಆಶೀರ್ವಚನದಲ್ಲಿ, ಅವರದೇ ನುಡಿಮುತ್ತು 'ಮಣ್ಣನ್ನು ಹೊನ್ನಾಗಿಸಿದ ತಪೋಮೂರ್ತಿ ಸಿದ್ಧಗಂಗೆಯ ಸ್ವಾಮಿಗಳು. ಅವರ ಸಾಧನೆ, ಸಿದ್ಧಿಯನ್ನು ಹದಿನೆಂಟು ಪುರಾಣಗಳಲ್ಲೆ ಅಲ್ಲ, ನೂರ ಎಂಟು ಪುರಾಣಗಳಲ್ಲಿ ಹೊಗಳಿದರೂ ಕಡಿಮೆಯೆ !' ಎಂದು ಮನತುಂಬಿ ಪ್ರಶಂಸಿಸಿರುವುದು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಸಾಧನೆಗೆ ಹಿಡಿದ ಕೈಗನ್ನಡಿಯಾಗಿದೆ.

ಪೂಜ್ಯ ಜಗದ್ಗುರುಗಳು ೧೯೩೩ರಲ್ಲಿ ಸಿದ್ಧಗಂಗಾ ಮಠಕ್ಕೆ ದಯಮಾಡಿಸಿ ಅಂದಿನ ಮಠದ ಸ್ಥಿತಿಗತಿಯನ್ನು ಗಮನಿಸಿ ೧೯೮೭ರಲ್ಲಿನ ಪ್ರಗತಿಗೆ ಹೋಲಿಸಿ, ನೂರ್ಮಡಿ ಹೆಚ್ಚಾಗಿರುವುದನ್ನು ಗುರುತಿಸಿ ಪ್ರಶಂಸಿಸಿರುವುದು ಅವರ ಹೃದಯವಂತಿಕೆಗೆ ಸಾಕ್ಷಿಯಾಗಿದೆ. ಪಂಚಪೀಠದ ಹಿರಿಯ ಚೇತನ ಲಿಂಗೈಕ್ಯ ಜಗದ್ಗುರುಗಳ ಹೊಗಳಿಕೆಗೆ ಭಾಜನರಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಸಾಧನೆ. ವಿರಕ್ತ ಶ್ರೇಷ್ಠವೆಂಬುದಕ್ಕೆ ಸಾಕ್ಷಿಯಾಗಿದೆ. ದೊಡ್ಡವರು ದೊಡ್ಡ ಗುಣ ಹೊಂದಿ ದೊಡ್ಡದನ್ನೇ ವೀಕ್ಷಿಸಿ ಅದ್ಭುತವನ್ನೇ ಗುರುತಿಸಿರುವುದು ಸದಾಸ್ಮರಣೆಯವಲ್ಲವೆ?

□

**ಶ್ರೀವಾಣಿ**

ನಮ್ಮ ಸಂಸ್ಕೃತಿಯ ದಿವ್ಯ ಬೆಳಕಿಗೆ ಅನೀತಿಯ, ಭ್ರಷ್ಟಾಚಾರದ ಕವಚವನ್ನ ತೊಡಿಸಿದ್ದಾರೆ. ಅದನ್ನು ಕಿತ್ತು ಹಾಕಿದರೆ ಮಾನವೀಯತೆಯ ಬಂಗಾರ ಅರಳುತ್ತದೆ. ಜಗತ್ತಿನ ಕಣ್ಣು ತೆರೆಯುತ್ತದೆ.





# ಭಕ್ತ ಸಾಗರದ ನಡುವೆ ಸಂಭ್ರಮದ ಶತಮಾನೋತ್ಸವ

– ಎಚ್.ಎಸ್. ಸಿದ್ಧಗಂಗಪ್ಪ
೫೩/೧, 'ಶಿವಕೃಪ', ಮೊದಲನೇ ಮುಖ್ಯರಸ್ತೆ
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ
ವಿಜಯನಗರ, ಬೆಂಗಳೂರು – ೪೦.




ಭಾರತದ ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀಮತಿ ಪ್ರತಿಭಾ ದೇವಿಸಿಂಗ್ ಪಾಟೀಲ್ ಅವರು ರಿಮೋಟ್ ಗುಂಡಿ ಒತ್ತುವುದರ ಮೂಲಕ ಶತಮಾನೋತ್ಸವ ಸಮಾರಂಭವನ್ನು ಉದ್ಘಾಟಿಸಿದರು

ಫೆಬ್ರವರಿ ೨, ೩ ಮತ್ತು ೪, ೨೦೦೯ – ಲಕ್ಷ ಲಕ್ಷ ಭಕ್ತರ ಹೃದಯ ಮಂದಿರದಲ್ಲಿ ಮರೆಯಲಾಗದ ಪವಿತ್ರ, ಮಹತ್ವದ ದಿನಗಳು. ಈ ನಾಡಿನ ಪುಣ್ಯ ಜ್ಯೋತಿ. ಈ ರಾಷ್ಟ್ರಕಂಡ ಮಹಾಮಾನವತವಾದಿ, ಮಹಾಸಂತ, ಮಹಾತಪಸ್ವಿ, ಮಾತೃಚೇತನ, ತ್ರಿವಿಧ ದಾಸೋಹ ಮೂರ್ತಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನೂರೊಂದನೇ ಹುಟ್ಟು ಹಬ್ಬವನ್ನು ಅತ್ಯಂತ ಸಂತೋಷ, ಸಡಗರ ಸಂಭ್ರಮದಿಂದ 'ನಭೂತೋ ನ ಭವಿಷ್ಯತಿ' ಎಂಬಂತೆ ಅರ್ಥಪೂರ್ಣವಾಗಿ, ಸಮಾರಂಭ ನಡೆದರೆ ಹೀಗೆ ನಡೆಯಬೇಕು. ಸಮಾರಂಭದ ವ್ಯವಸ್ಥೆಯೆಂದರೆ ಹೀಗಿರಬೇಕು ಎನ್ನುವಂತೆ ನಡೆಯಿತು.

ನಾನಾ ಕಡೆಗಳಿಂದ ನದಿಗಳು ಹರಿದು ಬಂದು ಸಾಗರ ಸೇರುವಂತೆ, ನಾಡಿನ, ರಾಷ್ಟ್ರದ ಮೂಲೆ ಮೂಲೆಗಳಿಂದ ಲಕ್ಷ ಲಕ್ಷ ಜನ ಭಕ್ತರು, ಅಭಿಮಾನಿಗಳು ಶ್ರೀಮಠಕ್ಕೆ ಬಂದು ಸೇರುತ್ತಿದ್ದ ದೃಶ್ಯ ನೋಡಲು ಕಣ್ಣಿಗೆ ಹಬ್ಬ. ಇವರೆಲ್ಲರೂ ಸ್ವಯಂ ಪ್ರೇರಣೆಯಿಂದ, ಶ್ರದ್ಧಾ ಭಕ್ತಿಯಿಂದ ಬಂದವರು. ಸಮಾರಂಭಕ್ಕೆ ಮುನ್ನ ದಿನವೇ ಲಕ್ಷಾಂತರ ಭಕ್ತರು ಬಂದು ಶ್ರೀಗಳವರ ದರ್ಶನ ಮಾಡಿ ತಮ್ಮ ಜೀವನ ಸಾರ್ಥಕವಾಯಿತೆಂಬ ಧನ್ಯತೆಯ ಭಾವನೆ ಅವರ ಮುಖಗಳಲ್ಲಿ ಎದ್ದು ಕಾಣುತ್ತಿತ್ತು. ಪೂಜ್ಯ ಶ್ರೀಗಳು ನಡೆದಾಡುವ ಶ್ರೀ ಸಿದ್ಧಗಂಗಾ ಕ್ಷೇತ್ರದ ತಾಣ ಪರಮಪವಿತ್ರವೆಂಬ ಭಾವನೆ ಭಕ್ತರದು. ಇಲ್ಲಿಯ ಮಣ್ಣಿನ ಒಂದೊಂದು ಕಣವೂ ದೈವತ್ವದ ಲೇಪನವನ್ನು ಪಡೆದಿದೆ. ಇಂಥ ಪವಿತ್ರ ತಾಣದಲ್ಲಿ ಓಡಾಡುವುದೇ ಪೂರ್ವಜನ್ಮ ಪುಣ್ಯದ ಫಲ. ಅಂತಹ ಪುಣ್ಯಕ್ಕೆ ಭಾಜನರಾದವರು ಲಕ್ಷೋಪ ಲಕ್ಷ ಜನರು.

ಹಿಮಾಲಯಕ್ಕೆ ಮತ್ತೊಂದು ಉಪಮೆ ಎಂದರೆ ಹಿಮಾಲಯವೇ. ಅಂತೆಯೇ ಸಾಗರಕ್ಕೆ ಮತ್ತೊಂದು ಹೋಲಿಕೆ ಸಾಗರವೇ. ಜನಸಾಗರ ಪದಕ್ಕೆ ವ್ಯಾಖ್ಯಾನವೆಂದರೆ ಮೂರು ದಿನಗಳ

ಕಾಲ ನಡೆದ ಸಮಾರಂಭದಲ್ಲಿ ಭಾಗವಹಿಸಿದ ಭಕ್ತರ ಅಭಿಮಾನಿಗಳ ಮಹಾಪೂರವೇ ನಿದರ್ಶನವಾಗಿತ್ತು. ಜನಪದರ ಆಡುಭಾಷೆಯಲ್ಲಿ ಹೇಳುವುದಾದರೆ "ಜನ ಅಂದ್ರೆ ಜನ, ಮರಳು ಹಾಕಿದ್ರು ಇಳಿತಿರ್ಲಿಲ್ಲ ಮಳೆ ಉಯಿದ್ರು ಭೂಮಿ ಮ್ಯಾಲೆ ನೀರು ಬೀಳ್ತ್ತಿರಲಿಲ್ಲ. ನಮ್ಮ ಜೀವಮಾನ್ದಾಗೆ ಇಷ್ಟೊಂದು ಜನ ಸೇರಿರೋದು ನೋಡಿರ್ಲಿಲ್ಲ". ನಿಜ, ಅವರ ಮಾತು ಅಕ್ಷರಶಃ ನಿಜ. ಶ್ರೀಕ್ಷೇತ್ರದ ಪರಿಸರದಲ್ಲಿ ಅಡ್ಡಾಡುತ್ತಿದ್ದರೆ ನೆಲವೇ ಕಾಣುತ್ತಿರಲಿಲ್ಲ. ದಕ್ಷಿಣ ಕರ್ನಾಟಕ, ಉತ್ತರ ಕರ್ನಾಟಕ, ಕರಾವಳಿ ಎಲ್ಲಾ ಕಡೆಗಳಿಂದಲೂ ಪ್ರವಾಹೋಪಾದಿಯಲ್ಲಿ ಜನರು ಶ್ರೀಕ್ಷೇತ್ರದಲ್ಲಿ ನಡೆದ ಶತಮಾನೋತ್ಸವ ಸಮಾರಂಭಕ್ಕೆ ಸಾಕ್ಷಿಯಾದರು.

ಸುಸಜ್ಜಿತವಾದ, ವಿಶಾಲವಾದ ಎತ್ತರವಾದ ಶ್ರೀ ಗೋಸಲ ಸಿದ್ಧೇಶ್ವರರ ವೇದಿಕೆ, ಭವ್ಯವಾದ ಪೆಂಡಾಲ್, ಸುಮಾರು ೪೫ ಸಾವಿರಕ್ಕೂ ಹೆಚ್ಚು ಕುರ್ಚಿಗಳ ಆಸನ ವ್ಯವಸ್ಥೆ.

ಫೆಬ್ರವರಿ ೨ ರಂದು ಮುಂಜಾನೆ ನಿಗದಿತ ಅವಧಿಯಲ್ಲಿ ಶತಮಾನೋತ್ಸವ ಸಮಾಂಭಕ್ಕೆ ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾ ಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಚಾಲನೆ ನೀಡಿದವರು ಭಾರತದ ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀಮತಿ ಪ್ರತಿಭಾ ದೇವಿಸಿಂಗ್ ಪಾಟೀಲ್ ಅವರು.

ರಾಷ್ಟ್ರಪತಿಗಳು ಸಮಾರಂಭದ ವೇದಿಕೆಗೆ ಬರುವ ಮುನ್ನ ಶ್ರೀಮಠದ ಕಛೇರಿಗೆ ಭೇಟಿ ನೀಡಿ ಪರಮಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಪಡೆದರು. ರಾಷ್ಟ್ರದ ಪರವಾಗಿ ಹೂಗುಚ್ಛವನ್ನು ನೀಡಿ ಶುಭಾಶಯಗಳನ್ನು ಸಲ್ಲಿಸಿದರು. ರಾಜ್ಯಪಾಲರಾದ ಶ್ರೀ ರಾಮೇಶ್ವರ ಠಾಕೂರ್, ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ, ವಿರೋಧಪಕ್ಷದ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ, ಶತಮಾನೋತ್ಸವ ಸಮಿತಿ ಅಧ್ಯಕ್ಷರಾದ ನ್ಯಾಯಮೂರ್ತಿ ವ್ಹಿ.ಎಸ್. ಮಳಿಮಠ, ಶತಮಾನೋತ್ಸವ ಸಮಿತಿ ಗೌರವಾಧ್ಯಕ್ಷರಾದ ನ್ಯಾಯಮೂರ್ತಿ ಡಾ. ಶಿವರಾಜ ವಿ. ಪಾಟೀಲ್, ಕಾರ್ಯಾಧ್ಯಕ್ಷ ಶ್ರೀ ಬಿ.ಎಸ್. ಮುದ್ದಪ್ಪ, ಸಂಚಾಲಕರೂ, ಶಾಸಕರೂ ಆದ ಶ್ರೀ ವಿ. ಸೋಮಣ್ಣ ಮೊದಲಾದ ಗಣ್ಯರು ಪೂಜ್ಯ ಶ್ರೀಗಳವರನ್ನು ಆಡಳಿತ ಕಛೇರಿಯಲ್ಲಿ ಭೇಟಿಯಾಗಿ ದರ್ಶನ ಹಾಗೂ ಆಶೀರ್ವಾದ ಪಡೆದರು. ವಿವಿಧ ಮಠಗಳ ಹರಗುರು ಚರಮೂರ್ತಿಗಳು ಸ್ವಾಮೀಜಿಯವರಿಗೆ ಗೌರವ ಸಲ್ಲಿಸಿದರು.

ಪರಮಪೂಜ್ಯ ಶ್ರೀಗಳವರೊಂದಿಗೆ ರಾಷ್ಟ್ರಪತಿಗಳು ವೇದಿಕೆಗೆ ಬರುತ್ತಿದ್ದಂತೆಯೆ ಸಭೆ ಕ್ಷಣ ಕಾಲ ಮೌನವಾಯಿತು. ಭಕ್ತರ ಉತ್ಸಾಹ ಚಿಮ್ಮಿ, ಭಾವುಕರಾಗಿ ಜಯಘೋಷ ಮಾಡಿದರು. ಆ ಜಯಘೋಷ ಶ್ರೀಮಠ ಪರಿಸರದಲ್ಲಿ ಪ್ರತಿಧ್ವನಿಸಿತು. ಶ್ರೀಗಳವರ ಅನನ್ಯ ಸೇವೆಯನ್ನು ಬಣ್ಣಿಸಲು ಶಬ್ದಗಳು ಪೈಪೋಟಿ ಮಾಡುತ್ತವೆ.



ಪರಮಪೂಜ್ಯ ಶ್ರೀ ಶ್ರೀಗಳವರಿಗೆ ರಾಷ್ಟ್ರಪತಿಗಳು ಪುಷ್ಪವೃಷ್ಟಿ ಮಾಡುವುದರ ಮೂಲಕ ಭಾರತ ಪರವಾಗಿ ಭಕ್ತಿ ಸಮರ್ಪಣೆ ಅರ್ಪಿಸಿದರು







ಘನತೆವೆತ್ತ ರಾಷ್ಟ್ರಪತಿಗಳಿಂದ ಉದ್ಘಾಟನಾ ಭಾಷಣ



ಕಿಕ್ಕಿರಿದ ಪ್ರೇಕ್ಷಕರು



ಸಮಾರಂಭದಲ್ಲಿ ಗಣ್ಯರು

ಅಂತಹ ಪುಣ್ಯ ಜ್ಯೋತಿಯನ್ನು ಕಣ್ತುಂಬ ನೋಡುವ ಅವಕಾಶ ಜೀವಮಾನ ದಲ್ಲಿಯೇ ಒಂದು ಅವಿಸ್ಮರಣೀಯ ಘಟನೆ.

ವಿಶಿಷ್ಟವಾಗಿ ವಿನ್ಯಾಸಗೊಳಿಸಿದ್ದ ಭವ್ಯವಾದ ವೇದಿಕೆಯಲ್ಲಿ ರಾಷ್ಟ್ರಪತಿಗಳು ರಿಮೋಟ್ ಒತ್ತುತ್ತಿದ್ದಂತೆ ವೇದಿಕೆಯ ಮುಂಭಾಗದಲ್ಲಿ ಅತ್ಯಾಧುನಿಕ ತಂತ್ರಜ್ಞಾನ ಬಳಸಿಕೊಂಡು ನಿರ್ಮಿಸಿದ್ದ '೧೦೧' ಎಂಬ ಸಂಖ್ಯೆ ಝಗ ಝಗಿಸಿ ಮೇಲೆ ಬರುವ ಮೂಲಕ ತನ್ನ ವೈಶಿಷ್ಟ್ಯ ಪ್ರದರ್ಶಿಸಿತು. ಈ ಅಪೂರ್ವ ಕ್ಷಣವನ್ನು ಪ್ರೇಕ್ಷಕರು ಕಣ್ಮನಗಳಲ್ಲಿ ತುಂಬಿಸಿಕೊಂಡರು.

ರಾಷ್ಟ್ರಪತಿಗಳು ತಮ್ಮ ಉದ್ಘಾಟನಾ ಭಾಷಣದಲ್ಲಿ ಪರಮಪೂಜ್ಯ ಶ್ರೀಗಳವರು ಕಳೆದ ೮೦ ವರ್ಷಗಳಿಂದ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿ, ಗ್ರಾಮೀಣ ಬಡಮಕ್ಕಳನ್ನು ಜಾತಿ ಭೇದವಿಲ್ಲದೆ ಮಠದಲ್ಲಿ ಆಶ್ರಯ ನೀಡಿ ಗುರುಕುಲ ಮಾದರಿಯಲ್ಲಿ ಶಿಕ್ಷಣ ನೀಡುತ್ತಿರುವ ಶ್ರೀಗಳವರ ತತ್ತ್ವಗಳನ್ನು ಸರ್ಕಾರೇತರ ಸಂಸ್ಥೆಗಳು ಅನುಸರಿಸಿ ಗ್ರಾಮೀಣ ಪ್ರದೇಶಗಳಿಗೆ ತೆರಳಿ ಸೇವೆ ಸಲ್ಲಿಸಬೇಕು. ಅದೇ ದೇಶಕ್ಕೆ ಸಲ್ಲಿಸುವ ನಿಜವಾದ ಸೇವೆ ಎಂದು ಅಭಿಪ್ರಾಯಪಟ್ಟರು.

ಘನತೆವೆತ್ತ ರಾಷ್ಟ್ರಪತಿಗಳು ತಮ್ಮ ಉದ್ಘಾಟನಾ ಭಾಷಣವನ್ನು ಕನ್ನಡದಲ್ಲಿ ಪ್ರಾರಂಭಿಸಿ "ಶ್ರೀ ಶಿವಕುಮಾರ ಸ್ವಾಮೀಜಿ ಅವರ ಶತಮಾನೋತ್ಸವದಲ್ಲಿ ಭಾಗವಹಿಸಲು ಸಂತೋಷವಾಗುತ್ತಿದೆ. ಸ್ವಾಮೀಜಿ ಅವರಿಗೆ ಹೃದಯಪೂರ್ವಕ ನಮಸ್ಕಾರಗಳು, ಭಕ್ತರಿಗೆ ಶುಭಾಶಯಗಳು" ಎಂದು ಹೇಳಿದ ರಾಷ್ಟ್ರಪತಿಗಳು 'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ' ಹಾಗೂ 'ದಯವೇ ಧರ್ಮದ ಮೂಲವಯ್ಯ' ಎಂದು ಅಸ್ಖಲಿತ ಕನ್ನಡದಲ್ಲಿ ಹೇಳಿದ್ದು ಪ್ರೇಕ್ಷಕರ ಮನಸ್ಸನ್ನು ಸೂರೆಗೊಂಡಿತು. ಪೂಜ್ಯ ಶ್ರೀಗಳವರು ಈ ಸಿದ್ಧಾಂತವನ್ನು ಆಚರಿಸುವುದರ ಮೂಲಕ ಸಮಾಜಕ್ಕೆ ಬೆಳಕಾಗಿದ್ದಾರೆ. ಅವರ ಆದರ್ಶವನ್ನು ನಾವೆಲ್ಲರೂ ಪಾಲಿಸೋಣ' ಎಂದು ಕರೆ ನೀಡಿದರು.

ಬಸವಾದಿ ಶರಣರ ಕಾಯಕ-ದಾಸೋಹ ತತ್ತ್ವಗಳನ್ನು ತಮ್ಮ ಜೀವನದುದ್ದಕ್ಕೂ ಅಳವಡಿಸಿಕೊಂಡು ಆಚರಿಸುತ್ತಾ ಬಂದಿರುವ ಪೂಜ್ಯ ಶ್ರೀಗಳು ತಮ್ಮ ಕಾರ್ಯಕ್ಷೇತ್ರದ ಮೂಲಕ ವಿದ್ಯಾರ್ಥಿಗಳ ಮೇಲೆ ಗಾಢವಾದ ಪ್ರಭಾವ ಬೀರುತ್ತಿದ್ದಾರೆ. ಇದರಿಂದ ನಾಡಕಟ್ಟುವ ಸುಸಂಸ್ಕೃತ ಪ್ರಜೆಗಳು ರೂಪುಗೊಳ್ಳುತ್ತಿದ್ದಾರೆ. ಶ್ರೀಕ್ಷೇತ್ರದಲ್ಲಿ ಪೂಜ್ಯ ಶ್ರೀಗಳವರ ದಿವ್ಯ ಮಾರ್ಗದರ್ಶನದಲ್ಲಿ ಕಲಿತ ವಿದ್ಯಾರ್ಥಿಗಳು ದೇಶ-

ವಿದೇಶಗಳಲ್ಲಿ ಹಲವಾರು ಕ್ಷೇತ್ರಗಳಲ್ಲಿ ಮಹತ್ವದ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಭಾರತೀಯ ಸಂಸ್ಕೃತಿ, ಪರಂಪರೆಗಳನ್ನು ಅರ್ಥಪೂರ್ಣವಾಗಿ ಮುಂದುವರಿಸಿಕೊಂಡು ಬರುತ್ತಿರುವ ಶ್ರೀಗಳು ತಮ್ಮ ದಿನನಿತ್ಯ ಕೆಲಸ, ಕಾರ್ಯಗಳಲ್ಲಿ ಶ್ರದ್ಧೆ ಮತ್ತು ಪ್ರಾಮಾಣಿಕತೆಯುಳ್ಳವರು. ದೇಶದ ಎಲ್ಲಾ ಸಾಮಾಜಿಕ ಪಿಡುಗುಗಳ ಪರಿಹಾರಕ್ಕೆ ಶಿಕ್ಷಣದಿಂದ ಮಾತ್ರ ಸಾಧ್ಯ ಎಂದು ಕಂಡುಕೊಂಡ ಶ್ರೀಗಳು ೧೩೦ಕ್ಕೂ ಹೆಚ್ಚು ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿದ್ದಾರೆ. ಭವಿಷ್ಯದ ಸಮಾಜಕ್ಕೆ ಈ ಮೂಲಕ ಉನ್ನತ ಕೊಡುಗೆ ನೀಡುತ್ತಿದ್ದಾರೆ. ಶ್ರೀಗಳವರ ಈ ಎಲ್ಲಾ ಕೆಲಸಗಳಿಗೆ ಬಸವಾದಿ ಶರಣರ ಆದರ್ಶವೇ ಕಾರಣ ಎಂದು ಬಣ್ಣಿಸಿದರು.

ನಿತ್ಯ ಬಳಸುವ ಆಹಾರ ಧಾನ್ಯಗಳ ಬೆಲೆ ಕಳೆದ ವರ್ಷದಿಂದ ಹಠಾತ್ತನೆ ಏರಿಕೆಯಾಗಿರುವುದಕ್ಕೆ ಕಳವಳ ವ್ಯಕ್ತಪಡಿಸಿದ ರಾಷ್ಟ್ರಪತಿಗಳು ಬೆಲೆ ಏರಿಕೆಗೆ ಕಡಿವಾಣ ಹಾಕಿ ಆಹಾರ ಉತ್ಪಾದನೆಗಳು ಹೆಚ್ಚಾಗುವಂತೆ ಮಾಡುವ ಅಗತ್ಯ ಇಂದು ಹೆಚ್ಚಾಗಿದೆ. ಈ ಸಮಸ್ಯೆ ಪರಿಹಾರ ಮಾಡಲು ಸಮರೋಪಾದಿಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಆಹಾರ ಉತ್ಪಾದನೆಗೆ ಸೂಕ್ತ ಸೌಲಭ್ಯಗಳನ್ನು ಒದಗಿಸಿಕೊಡುವುದರ ಮೂಲಕ ರಾಷ್ಟ್ರದ ಅಭಿವೃದ್ಧಿಗೆ ಪ್ರತಿಯೊಬ್ಬರು ಶ್ರಮಿಸಬೇಕು ಎಂದು ಕರೆ ನೀಡಿದರು.

ವಿಶ್ವದಲ್ಲೇ ಅತಿ ಹೆಚ್ಚು ಜನಸಂಖ್ಯಾ ಸ್ಫೋಟವಾಗುತ್ತಿರುವ ಭಾರತದ ಜನಸಂಖ್ಯೆಗೆ ಅನುಗುಣವಾಗಿ ಆಹಾರ ಉತ್ಪಾದಿಸಲು ಮತ್ತೊಂದು ಹಸಿರು ಕ್ರಾಂತಿ ನಡೆಯಬೇಕು ಎಂದು ಆಶಿಸಿದ ರಾಷ್ಟ್ರಪತಿಗಳು ದೇಶದ ಭವಿಷ್ಯದ ದೃಷ್ಟಿಯಿಂದ ಜನಸಂಖ್ಯಾ ಸ್ಫೋಟಕ್ಕೆ ಕಡಿವಾಣ ಹಾಕುವುದರ ಜೊತೆಗೆ ಅಗತ್ಯತೆಗೆ ಅನುಗುಣವಾಗಿ ಆಹಾರವನ್ನು ಉತ್ಪಾದಿಸಬೇಕು. ಈ ನಿಟ್ಟಿನಲ್ಲಿ ಕೃಷಿ ವಿಜ್ಞಾನಿಗಳು ಕಾಲಬದ್ಧ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯೋನ್ಮುಖರಾಗಬೇಕು ಕೃಷಿಗೆ ಪ್ರಮುಖವಾಗಿ ನೀರು, ವಿದ್ಯುತ್, ಆಧುನಿಕ ಉಪಕರಣಗಳನ್ನು ಒದಗಿಸುವ ಮೂಲಕ ಆಹಾರ ಉತ್ಪಾದನೆಗೆ ಆಯಾ ರಾಜ್ಯ ಸರ್ಕಾರಗಳು ಹೆಚ್ಚಿನ ಮಹತ್ವ ನೀಡಬೇಕು ಎಂದರು.

ಉದ್ಘಾಟನಾ ಸಮಾರಂಭದಲ್ಲಿ ಶ್ರೀಗಳಿಗೆ ರಾಷ್ಟ್ರಪತಿ ಶ್ರೀಮತಿ ಪ್ರತಿಭಾ ದೇವಿಸಿಂಗ್ ಪಾಟೀಲ್, ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ರಾಜ್ಯಪಾಲ ಶ್ರೀ



ರಾಷ್ಟ್ರಪತಿಗಳು ಪೂಜ್ಯರ ಕಛೇರಿಗೆ ಭೇಟಿ ನೀಡಿ ಶುಭ ಹಾರೈಸಿದರು



ರಾಜ್ಯಪಾಲ ಶ್ರೀ ರಾಮೇಶ್ವರ ಠಾಕೂರ್ ಅವರಿಂದ ಶುಭಹಾರೈಕೆ



ಪರಮಪೂಜ್ಯರೊಂದಿಗೆ ರಾಷ್ಟ್ರಪತಿಗಳಿಂದ ಕುಶಲೋಪರಿ










ಪರಮಪೂಜ್ಯ ಶ್ರೀಗಳು ರಾಷ್ಟ್ರಪತಿಗಳಿಗೆ
ಶಾಲು ಹೊದಿಸಿ, ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿ ಆಶೀರ್ವದಿಸುತ್ತಿರುವುದು

ರಾಮೇಶ್ವರ ಠಾಕೋರ್, ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ, ಶೇಖಾವತ್ ಅವರು ಮಲ್ಲಿಗೆ, ಕಾಕಡ, ಕನಕಾಂಬರಿ, ಗುಲಾಬಿ ಹೂಗಳಿಂದ ಪುಷ್ಪವೃಷ್ಟಿ ಸುರಿಸಿ ತಮ್ಮ ಗುರುವಂದನೆ ಸಲ್ಲಿಸಿದರು.

ರಾಷ್ಟ್ರಪತಿಗಳು ತಮ್ಮ ಭಾಷಣದಲ್ಲಿ 'ಇಂದಿನ ಯುವಕರನ್ನು ಸುಶಿಕ್ಷಿತರನ್ನಾಗಿ ಮಾಡುವುದು ನಮ್ಮೆಲ್ಲರ ಜವಾಬ್ದಾರಿ. ಶಿಕ್ಷಣದ ಮೂಲಕ ಈ ಪೀಳಿಗೆಯನ್ನು ಕ್ರಿಯಾಶೀಲ ನಾಗರಿಕರನ್ನಾಗಿ ರೂಪಿಸುವುದು ನಮ್ಮ ಕರ್ತವ್ಯ ಎಂದು ನುಡಿದು ದಾನಗಳಲ್ಲಿ ವಿದ್ಯಾದಾನ ಮತ್ತು ಅನ್ನದಾನವೇ ಶ್ರೇಷ್ಠ ಎಂದು ವೇದಗಳಲ್ಲಿ ಉಲ್ಲೇಖವಾಗಿದೆ. ಹಸಿವನ್ನು ಓಡಿಸಿ ಜ್ಞಾನವನ್ನು ತುಂಬುವ ಕೆಲಸವನ್ನು ಶ್ರೀಗಳವರು ನೂರಾರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ದಾಸೋಹ ನೀಡುವುದರ ಮೂಲಕ ಸಾಕಾರಗೊಳಿಸಿದ್ದಾರೆ' ಎಂದು ಪ್ರಶಂಶಿಸಿದರು.

## ನೂತನ ವಿದ್ಯಾರ್ಥಿನಿಲಯ ಕಟ್ಟಡ ಲೋಕಾರ್ಪಣೆ

ನೂತನ ವಿದ್ಯಾರ್ಥಿನಿಲಯ ಕಟ್ಟಡವನ್ನು ಉದ್ಘಾಟಿಸಿ ಮಾತನಾಡಿದ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು "ಪರಮಪೂಜ್ಯ ಶ್ರೀಗಳವರು ಗಂಗಾನದಿಯಷ್ಟೇ ವಿಶಾಲ ಮತ್ತು ಪವಿತ್ರ; ಅವರು ನಡೆದಾಡುವ ದೇವರು. ಇವರ ಸಾಧನೆ ಶ್ರೀ ಸಿದ್ಧಗಂಗಾ ಮಠವನ್ನು ಜಗದಗಲಕ್ಕೆ, ಮುಗಿಲೆತ್ತರಕ್ಕೆ ಏರಿಸಿದೆ" ಎಂದು ಬಣ್ಣಿಸಿದರು.

ಅವರು ತಮ್ಮ ಭಾಷಣದಲ್ಲಿ "ಪೂಜ್ಯ ಶ್ರೀಗಳು ಸಾಮಾಜಿಕ ಪರಿವರ್ತನೆಯ ದಿಕ್ಕಿನಲ್ಲಿ ಬಸವಾದಿ ಶರಣರ ತತ್ವ, ಆದರ್ಶಗಳನ್ನು ೨೧ನೇ ಶತಮಾನದಲ್ಲಿ ಸಾಕಾರಗೊಳಿಸುತ್ತಿದ್ದಾರೆ. ಇವರೊಬ್ಬರು ಯುಗಪುರುಷ ಆಧುನಿಕ ಬಸವಣ್ಣ" ಎಂದು ಬಣ್ಣಿಸಿದರು. ಅವರು ಇದೇ ಸಂದರ್ಭದಲ್ಲಿ ಶ್ರೀಗಳವರ ಹುಟ್ಟೂರಾದ ಮಾಗಡಿ ತಾಲ್ಲೂಕಿನ ವೀರಾಪುರವನ್ನು ಸರ್ಕಾರ ದತ್ತು ಪಡೆದುಕೊಂಡು ಅಭಿವೃದ್ಧಿಪಡಿಸಲಿದೆ ಎಂದು ಪ್ರಕಟಿಸಿದರು.

ಮುಖ್ಯಮಂತ್ರಿಗಳು ತಮ್ಮ ನುಡಿ ನಮನಗಳಲ್ಲಿ ಜಗತ್ತಿನಲ್ಲಿ ಮಬ್ಬು ಆವರಿಸಿದ್ದು, ಜನರನ್ನು ಬೆಳಕಿನೆಡೆಗೆ ಕರೆದೊಯ್ಯುತ್ತಿರುವ ಧೀರ ಸನ್ಯಾಸಿ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು. ಅವರು ಜಾತಿ, ಧರ್ಮ ಪ್ರದೇಶದ ಬೇಧವಿಲ್ಲದೆ ಗ್ರಾಮೀಣ ಭಾಗದ ಸಾವಿರಾರು ಬಡ ಮಕ್ಕಳಿಗೆ ಆಶ್ರಯದಾತರಾಗಿರುವ ಶ್ರೀಗಳ ಸಾಧನೆ ಅನುಕರಣೀಯ ಎಂದು ಪ್ರಶಂಸಿದರು. ಶ್ರೀ ಯಡಿಯೂರಪ್ಪನವರು ಶ್ರೀಮಠದ ಶಿಕ್ಷಣ ಸಂಸ್ಥೆಗಳಲ್ಲಿ ಸಂಸ್ಕೃತಿಯುತವಾದ ನೈತಿಕ



ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರಿಂದ ನುಡಿನ ನಮನ



ಮುಖ್ಯಮಂತ್ರಿಗಳಿಗೆ ಪರಮಪೂಜ್ಯ ಶ್ರೀಗಳವರಿಂದ ಆಶೀರ್ವಾದ



ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು

ಶಿಕ್ಷಣವನ್ನು ನೀಡುವುದರ ಮೂಲಕ ಸಮಾಜವನ್ನು ಮುನ್ನಡೆಸುತ್ತಿದ್ದಾರೆ ಎಂದು ನುಡಿದರು.

## 'ಸಿದ್ಧಶೈಲ' ಗ್ರಂಥ ಬಿಡುಗಡೆ

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರ ಸಂಪಾದಕತ್ವದಲ್ಲಿ ಹೊರತಂದ 'ಸಿದ್ಧಶೈಲ' ಬೃಹತ್ ಗ್ರಂಥವನ್ನು ವಿಧಾನಸಭೆ ವಿರೋಧ ಪಕ್ಷದ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ಲೋಕಾರ್ಪಣೆ ಮಾಡಿ ಮಾತನಾಡಿ 'ಸಮಾಜ ಸೇವೆಯಲ್ಲಿ ೧೦೧ ವರ್ಷಗಳ ಸಾರ್ಥಕ ಜೀವನ ಶ್ರೀಗಳವರದು. ಎಲ್ಲ ವರ್ಗದ ಮಕ್ಕಳಿಗೆ ಮಾನವೀಯತೆ ನೆಲೆಯಲ್ಲಿ ಶ್ರೀಗಳವರು ಭವಿಷ್ಯ ರೂಪಿಸಿದ್ದಾರೆ. ಒಂದೇ ಕಡೆ ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಉಚಿತ ಶಿಕ್ಷಣ ಸಿದ್ಧಗಂಗಾ ಕ್ಷೇತ್ರದಲ್ಲಿ ಬಿಟ್ಟರೆ ದೇಶದಲ್ಲಿ ಇನ್ನೆಲ್ಲೂ ಇಲ್ಲ' ಎಂದು ನುಡಿದರು.

ಅಧ್ಯಕ್ಷತೆ ವಹಿಸಿದ್ದ ರಾಜ್ಯಪಾಲ ಶ್ರೀ ರಾಮೇಶ್ವರ ಠಾಕೂರ್ ಅವರು 'ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಅಪರೂಪದ ಅನಘ್ಯರತ್ನ. 'ವಸುದೈವಕ ಕುಟುಂಬಕಂ' ಶ್ಲೋಕಕ್ಕೆ ನಿಜವಾದ ಅರ್ಥ ತಂದುಕೊಟ್ಟವರು. ಶ್ರೀಗಳವರ ಮಾನವೀಯತೆಯ ಸೇವೆ ಮತ್ತಷ್ಟು ಕಾಲ ಈ ನಾಡಿಗೆ, ಈ ದೇಶಕ್ಕೆ ಸಿಗುವಂಗಾಗಲಿ' ಎಂದು ಆಶಿಸಿದರು.

"ಗ್ರಾಮೀಣ ಭಾರತದ ಸಂಕಟಗಳನ್ನು ಅರ್ಥಮಾಡಿ ಕೊಂಡಿರುವ ಶ್ರೀಗಳು ತ್ರಿವಿಧ ದಾಸೋಹದ ಮೂಲಕ ಪ್ರತಿವರ್ಷ ಸಹಸ್ರಾರು ಬಡ ವಿದ್ಯಾರ್ಥಿಗಳಿಗೆ ವಿದ್ಯೆ, ಅನ್ನ, ಆಶ್ರಯ ನೀಡಿ ಸುಸಂಸ್ಕೃತರನ್ನಾಗಿಸುತ್ತಿದ್ದಾರೆ. ಪ್ರಾಚೀನ ಭಾರತದ ಮೌಲ್ಯಗಳು, ಪರಂಪರೆ ನಮ್ಮ ಸಂಸ್ಕೃತ ಭಾಷೆಯಲ್ಲಿರುವ ಜ್ಞಾನವನ್ನು ಶ್ರೀಮಠದ ವಿದ್ಯಾರ್ಥಿಗಳಿಗೆ ಧಾರೆಯೆರೆಯುತ್ತಿದ್ದಾರೆ. ಸಂಸ್ಕೃತವನ್ನು ಕಲಿಸುವ ಮೂಲಕ ಭಾರತೀಯ ಸಂಸ್ಕೃತಿ ಬಗ್ಗೆ ದರ್ಶನ ಮಾಡಲು ಕಾರಣವಾಗಿದ್ದಾರೆ" ಎಂದರು.

'ಭಾರತದ ಹಲವಾರು ಸಂತರಲ್ಲಿ ಅತ್ಯಂತ ಅಪರೂಪರಾದ ಶ್ರೀ ಸಿದ್ಧಗಂಗಾ ಶ್ರೀಗಳು ಆಧ್ಯಾತ್ಮಿಕ ಜ್ಞಾನವನ್ನು ಆಧುನಿಕ ದೃಷ್ಟಿಕೋನದೊಂದಿಗೆ ಸಮ್ಮಿಳನಗೊಳಿಸಿ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸಿದ್ದಾರೆ. ಪರಂಪರೆ ಸಂಪ್ರದಾಯವನ್ನು ಸರಳ ಮತ್ತು ಉನ್ನತ ಚಿಂತನೆಗಳ ಮೂಲಕ ಮಾನವೀಯ ಮೌಲ್ಯಗಳಿಗೆ ಒತ್ತು ನೀಡಿದ್ದಾರೆ' ಎಂದು ಶ್ಲಾಘಿಸಿದರು.

ಶ್ರೀಗಳವರು ಎಂಟು ದಶಕಗಳಿಂದ ಅವಿರತ ಶ್ರಮದಿಂದ ಮಹತ್ವದ ಸಾಧನೆ ಮಾಡಿದ್ದಾರೆ. ಅವರ ಸೇವೆ ಅನನ್ಯವಾದುದು. ಇನ್ನೂ ಹಲವಾರು ವರ್ಷಗಳ ಕಾಲ ನಮ್ಮೊಂದಿಗಿದ್ದು








ವಿಧಾನಸಭೆ ವಿರೋಧ ಪಕ್ಷದ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರಿಂದ "ಸಿದ್ಧಶೈಲ" ಗುರುವಂದನ ಸಂಪುಟ ಲೋಕಾರ್ಪಣೆ

ಮಾರ್ಗದರ್ಶನ ಮಾಡಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ. ಶ್ರೀಗಳು ಧಾರ್ಮಿಕ, ಆಧ್ಯಾತ್ಮಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಮಾಡುತ್ತಿರುವ ಕ್ರಾಂತಿಗೆ ಇನ್ನೊಂದು ಹೆಸರಿಲ್ಲ ಎಂದು ಪ್ರಶಂಶಿಸಿದರು.

ಸಮಾರಂಭದ ಸಾನ್ನಿಧ್ಯ ವಹಿಸಿದ್ದ ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ನುಡಿ ನಮನಗಳಲ್ಲಿ 'ಶ್ರೀ ಶಿವಕುಮಾರ ಸ್ವಾಮೀಜಿಯವರು ಜಗತ್ತಿನಲ್ಲಿ ಎಲ್ಲರೂ ಮೆಚ್ಚುವಂತೆ ಶ್ರೀಮಠವನ್ನು ಕಟ್ಟಿ ಬೆಳೆಸಿದ್ದಾರೆ. ತಮ್ಮ ತಪಸ್ಸಿನ ಸಾಧನೆ ಸಿದ್ಧಿಯನ್ನು ನಾಡಿಗೆ ಧಾರೆ ಎರೆದಿದ್ದಾರೆ. ಈ ಮೂಲಕ ಸಾವಿರಾರು ಚೇತನಗಳು ಅರಳಲು ಕಾರಣರಾಗಿದ್ದಾರೆ' ಎಂದು ನುಡಿದರು.

ಜಗದ್ಗುರುಗಳು ತಮ್ಮ ಅನುಗ್ರಹ ನುಡಿಯಲ್ಲಿ ನಮನಗಳಲ್ಲಿ 'ಪೂಜ್ಯ ಸ್ವಾಮೀಜಿಯವರು ಈ ವರ್ಷ ಮೈಸೂರು ದಸರಾ ಉದ್ಘಾಟನೆ ಮಾಡಿದ್ದರಿಂದ ಹತ್ತು ದಿನಗಳ ಉತ್ಸವದಲ್ಲಿ ಯಾವುದೇ ಭಯೋತ್ಪಾದಕ ಕೃತ್ಯ ನಡೆಯಲಿಲ್ಲ. ಈ ಮಹಾನ್ ತಪಸ್ವಿಯ ಶತಮಾನೋತ್ಸವ ಸಮಾರಂಭದಲ್ಲಿ ಭಾಗವಹಿಸುತ್ತಿರುವುದು ನಮ್ಮ ಪುಣ್ಯ' ಎಂದರು.

## ಶ್ರೀಗಳವರ ಪ್ರಸಾದವಾಣಿ

ಎಲ್ಲರಿಂದ ಸನ್ಮಾನ ಸ್ವೀಕರಿಸಿದ ಪೂಜ್ಯ ಶ್ರೀಗಳು "ಭಗವಂತ ಆಯುಸ್ಸು ಕೊಟ್ಟಿದ್ದಾನೆ. ಕಿಂಚಿತ್ ಸೇವೆ ಮಾಡುತ್ತಿದ್ದೇನೆ. ಇದನ್ನೇ ದೊಡ್ಡ ಸೇವೆ ಎಂದು ಭಾವಿಸಿ ಸನ್ಮಾನ ಸಮಾರಂಭ ಮಾಡುತ್ತಿದ್ದೀರಿ. ಸಂತೋಷ" ಎಂದಾಗ ಲಕ್ಷಾಂತರ ಭಕ್ತರ ಕಣ್ಣುಗಳು ತೇವ ಗೊಂಡವು. ಅವರಿಗೆ ಭಗವಂತ ಮತ್ತಷ್ಟು ಆಯುಸ್ಸು ನೀಡಿ ಅವರ ದರ್ಶನ ಮಾಡುವ ಸೌಭಾಗ್ಯ ನಮಗೆ ದೊರೆಯುವಂತೆ ಮಾಡು ಎಂದು ಕುಳಿತಲ್ಲೇ ಭಗವಂತನನ್ನು ಪ್ರಾರ್ಥಿಸಿದರು.

ಪೂಜ್ಯ ಶ್ರೀಗಳವರು ತಮ್ಮ ಅನುಗ್ರಹ ನುಡಿಗಳಲ್ಲಿ "ಸುಖ ಜೀವನದ ಅಪೇಕ್ಷೆ, ಹಣದ ದುರಾಸೆ ಹಾಗೂ ಜಾತಿ ಮತ ಭೇದ ಎಂಬ ಮೂರು, ಪಿಡುಗುಗಳಿಂದ ಮುಕ್ತರಾಗುವಂತೆ ಭಕ್ತ ಸಮುದಾಯಕ್ಕೆ ಕರೆ ನೀಡಿದರು. ಈ ಮೂರು ಪಿಡುಗುಗಳಿಂದ ಮುಕ್ತರಾಗಿ, ಆಧ್ಯಾತ್ಮಿಕತೆ, ಕ್ರಿಯಾಶೀಲತೆ ಗುಣಗಳು ಹಾಗೂ ಪ್ರತಿಭಾ ಪ್ರೋತ್ಸಾಹದ ಜವಾಬ್ದಾರಿಗಳನ್ನು ರೂಢಿಸಿಕೊಳ್ಳಿ' ಎಂದು ಕರೆ ನೀಡಿದರು.

ಸಮಾಜದಲ್ಲಿರುವ ಪ್ರತಿಯೊಬ್ಬರೂ ತಮ್ಮ ತಮ್ಮ ಜವಾಬ್ದಾರಿಗಳನ್ನು ಅರಿತು ಕ್ರಿಯಾಶೀಲರಾಗಿ ಕೆಲಸ ಮಾಡಿದಾಗ ನಾವು ನಿಜವಾದ ಭಾರತೀಯರಾಗಿ ಬದುಕಿದಂತಾಗುತ್ತದೆ. ಶಾಂತಿ ಮತ್ತು ಸರ್ವಧರ್ಮ ಸಮನ್ವಯದ ಸಂಕಲ್ಪ ನಮ್ಮದಾಗಬೇಕು. ಪ್ರತಿಯೊಬ್ಬರಲ್ಲೂ ಭ್ರಾತೃತ್ವ ಕಾಣುವುದರಿಂದ ಜಗತ್ತು ಉಳಿಯುತ್ತದೆ. ಈ ಎಲ್ಲ ಅಂಶಗಳನ್ನು ಒಳಗೊಂಡ ಭಾರತೀಯ ಪರಂಪರೆ ಸಂಸ್ಕೃತಿ ಮತ್ತು ತತ್ತ್ವದಿಂದ ನಾವು ಎಂದಿಗೂ ದೂರ ಸರಿಯುವ ಪ್ರಯತ್ನ ಮಾಡಬಾರದೆಂದು ಕಿವಿಮಾತು ಹೇಳಿದರು.



ವಿಶೇಷವಾಗಿ ನಿರ್ಮಿಸಿದ ಟ್ರ್ಯಾಲಿಯಲ್ಲಿ ಕುಳಿತು ಪೂಜ್ಯ ಶ್ರೀ ಶ್ರೀಗಳವರು ಭಕ್ತರಿದ್ದಲ್ಲಿಗೆ ಹೋಗಿ ದರ್ಶನ ನೀಡುತ್ತಿರುವುದು

ಭರತಖಂಡವು ಜಗತ್ತಿಗೆ ಆಧ್ಯಾತ್ಮಿಕ ಬೆಳಕು ನೀಡಿದೆ. ಬಹುಸಂಸ್ಕೃತಿಗಳ ನಡುವೆ ಆತ್ಮಶ್ರೀಮಂತಿಕೆ ಕಾಯ್ದುಕೊಂಡು ಬಂದಿರುವ ಹೆಗ್ಗಳಿಕೆ ನಮ್ಮದು. ಮಾನವೀಯತೆಯ ನೆಲೆಯಲ್ಲಿ ಸಾಮರಸ್ಯ ಮೂಡಿಸುವ ವಿಶೇಷ ಶಕ್ತಿಯನ್ನು ಭಗವಂತ ಭಾರತಕ್ಕೆ ಕರುಣಿಸಿದ್ದಾನೆ. ಇವನ್ನು ಕಾಯ್ದುಕೊಂಡು ಹೋಗಬೇಕಾದ ಹೊಣೆಗಾರಿಕೆ ಪ್ರತಿಯೊಬ್ಬರ ಮೇಲಿದೆ' ಎಂದರು.

ಪೂಜ್ಯ ಶ್ರೀಗಳು ತನ್ನ ನುಡಿ ಸಂದೇಶಗಳಲ್ಲಿ 'ಭಾರತ ಉದ್ಧಾರವಾಗಬೇಕಾದರೆ ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಯಾಗಬೇಕು. ಇಡೀ ದೇಶದ ಪ್ರತಿಯೊಬ್ಬರೂ ವಿದ್ಯಾವಂತರಾದರೆ ಭಾರತದಲ್ಲಿ ಬೇರುಬಿಟ್ಟಿರುವ ಜಾತಿಯತೆ ಅಳಿದು ಜನ ಸೌಹಾರ್ದತೆಯಿಂದ ಬಾಳುವ ವಾತಾವರಣ ನಿರ್ಮಾಣವಾಗುತ್ತಿದೆ' ಎಂದು ಕಳಕಳಿ ವ್ಯಕ್ತಪಡಿಸಿದರು.



ಪೂಜ್ಯ ಶ್ರೀ ಶ್ರೀಗಳವರಿಂದ ನುಡಿ ಸಂದೇಶ

ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಭಕ್ತಿ ಸಮರ್ಪಣೆ







ರಾಷ್ಟ್ರಪತಿಗಳಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಗೌರವ ಸಮರ್ಪಣೆ

ಮನುಷ್ಯನಾದವನಿಗೆ ಕ್ರಿಯಾಶೀಲತೆಬೇಕು. ಕ್ರಿಯಾಶೀಲತೆಯೇ ಒಬ್ಬ ವ್ಯಕ್ತಿಯನ್ನು ಮೇಲ್ಪಟ್ಟಕ್ಕೆ ಏರಿಸುತ್ತದೆ. ನಾವಿಂದು ನಮ್ಮ ಪೂರ್ವಜರ ಕಾಲದಿಂದಲೂ ನಾವು ಕಾಪಾಡಿಕೊಂಡು ಬಂದಿರುವ ಮೌಲ್ಯಗಳನ್ನು ಕಡೆಗಣಿಸುತ್ತಿರುವುದರಿಂದಲೇ ಸಾಮಾಜಿಕವಾಗಿ ನಮ್ಮ ನೆಮ್ಮದಿ ಕದಡುತ್ತಿದೆ. ಸಮಾಜದಲ್ಲಿ ನೆಮ್ಮದಿ ಹಾಳಾದಾಗ ಮಾನವ ಹೇಗೆ ತಾನೇ ವೈಯಕ್ತಿಕವಾಗಿ ನೆಮ್ಮದಿಯಿಂದ ಬದುಕಲು ಸಾಧ್ಯ ! ಎಂದು ನುಡಿದರು.

ಶ್ರೀಮಠದಲ್ಲಿ ಶಿಕ್ಷಣಕ್ಕೆ ಒತ್ತು ನೀಡುತ್ತಿರುವ ಕಾರಣವನ್ನು ವಿವರಿಸಿದ ಪೂಜ್ಯ ಶ್ರೀಗಳು "ಶಿಕ್ಷಣವೇ ಶಕ್ತಿ ಎಂಬುದು ಕೇವಲ ಬಾಯಿಮಾತಿನ ಹೇಳಿಕೆಯಲ್ಲ ಎಂಬ ಅರಿವು ನಮಗೆ ಗುರುವರ್ಯರಾದ ಶ್ರೀ ಉದ್ದಾನ ಶಿವಯೋಗಿಗಳಿಂದ ಆಯಿತು. ಗುರುಗಳ ಕೃಪಾಶ್ರಯದಲ್ಲಿ ಬೆಳೆಯುತ್ತ ಬೆಳೆಯುತ್ತ ಬಸವಣ್ಣನವರ ತತ್ವಗಳನ್ನು ಓದಿ ಅರ್ಥಮಾಡಿಕೊಂಡು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ತೀರ್ಮಾನಿಸಿದೆ ಎಂದು ನುಡಿದರು. ನಮಗಂತೂ ಮಕ್ಕಳೇ ದೇವರು, ನಿರ್ಮಲ ಮನಸ್ಸಿನ ಮಕ್ಕಳಲ್ಲಿ ಭಗವಂತ ಕಾಣಿಸುತ್ತಾನೆ ಎಂದರು. ಸಮಾರಂಭದಲ್ಲಿ ವೇದಿಕೆಯ ಮುಂಭಾಗದಲ್ಲಿ ಉಪಸ್ಥಿತರಿದ್ದ ೨೦೦ಕ್ಕೂ ಹೆಚ್ಚು ವಿವಿಧ ಮಠಗಳ ಹರಗುರು ಚರಮೂರ್ತಿಗಳನ್ನು ಉದ್ದೇಶಿಸಿ ನುಡಿ ಸಂದೇಶ ನೀಡಿದ ಪೂಜ್ಯ ಶ್ರೀಗಳವರು 'ಆತ್ಮಶಕ್ತಿ ಬೆಳೆಸಿಕೊಳ್ಳಿ, ಚಾರಿತ್ರ್ಯ ಶುದ್ಧಿ ಕಾಪಾಡಿಕೊಳ್ಳಿ, ಕೀರ್ತಿವಾರ್ತೆಯತ್ತ ಮನಸ್ಸು ಕೊಡಬೇಡಿ, ಮಾನವೀಯತೆಯ ಆರಾಧಕರಾಗಿ




ಸುತ್ತೂರು ಜಗದ್ಗುರುಗಳಿಂದ ಶ್ರೀ ಶ್ರೀಗಳವರಿಗೆ ಗೌರವ ಸಮರ್ಪಣೆ

ನಿರ್ಮಲ ಮನಸ್ಸಿನ ಮಕ್ಕಳಲ್ಲಿ ಭಗವಂತನನ್ನು ಕಾಣಿ" ಎಂದು ಕರೆ ನೀಡಿದರು.

ಇಂದು ದೇಶ ಭಯೋತ್ಪಾದನೆ ಮತ್ತು ಜಾತೀಯತೆಯ ಹಿಡುಗಿನಿಂದ ನರಳುತ್ತಿದೆ. ಅಶಾಂತಿಯ ಬಿರುಗಾಳಿ ಬೀಸಿ ಜನ ಜೀವನ ಅಸ್ತವ್ಯಸ್ತವಾಗಿದೆ. ಕಾಯಕ ಸಂಸ್ಕೃತಿಯನ್ನು ಜನರು ಮರೆಯುತ್ತಿದ್ದಾರೆ. ಅಲ್ಪ ಶ್ರಮ, ಅಧಿಕ ಲಾಭದ ಆಸೆ ಎಲ್ಲೆಲ್ಲೂ ಕಾಣುತ್ತಿದೆ. ಬಸವಾದಿ ಶರಣರು ಆಚರಿಸಿದ ಕಾಯಕ-ದಾಸೋಹಗಳಿಂದ ಜನರು ದೂರ ಸರಿಯುತ್ತಿದ್ದಾರೆ. ವಿಜ್ಞಾನ ಅದ್ಭುತವಾಗಿ ಬೆಳೆದರೂ, ಅದು ವಿನಾಶಮುಖಿಯಾಗುತ್ತಿದೆ. ಇದನ್ನು ವಿಕಾಸಮುಖಿಯತಾಗಿ ಪರಿವರ್ತಿಸುವ ಕೆಲಸ ಆಗಬೇಕು ಎಂದರು.

**ಸಹಕಾರಕ್ಕೆ ಕೃತಜ್ಞತೆ**

ಮಠ ಇಷ್ಟು ಎತ್ತರಕ್ಕೆ ಬೆಳೆಯಲು ಸಹಸ್ರ ಜನರ ಶ್ರಮ, ಸಹಕಾರವಿದೆ. ರೈತರು, ಜನ ಸಾಮಾನ್ಯರು, ಕೂಲಿ ಕಾರ್ಮಿಕರು ತಮ್ಮ ದುಡಿಮೆಯ ಹಣವನ್ನು ಶ್ರೀಮಠಕ್ಕೆ ನೀಡಿ ಮಠವನ್ನು ಬೆಳೆಸಿದ್ದಾರೆ. ಸರ್ಕಾರಗಳೂ ಸಂತೋಷಪಟ್ಟು ಸಹಕಾರ ನೀಡಿವೆ. ಎಲ್ಲರ ಉದಾರ ಮನಸ್ಸಿನ ಸಹಕಾರ ಸಹಾಯದಿಂದ ಮಠ ಬೆಳೆದಿದೆ ಎಂದು ಹೇಳುವುದರ ಮೂಲಕ ಸಮಸ್ತರಿಗೆ ಕೃತಜ್ಞತೆಗಳನ್ನು ಸಲ್ಲಿಸಿದರು.

**ಅಭಿನಂದನಾ ಪತ್ರ ಸಮರ್ಪಣೆ**

'ವಿಶ್ವಜ್ಯೋತಿಗೆ ಭಾವ ನಮನ' ಎಂಬ ಶೀರ್ಷಿಕೆಯಡಿ ಶ್ರೀಗಳ ಶತಮಾನೋತ್ಸವ ಸಮಿತಿ ಸಿದ್ಧಗೊಳಿಸಿದ್ದ ಸುದೀರ್ಘ ಕೃತಜ್ಞತಾ ಪತ್ರವನ್ನು ಶತಮಾನೋತ್ಸವ ಸಮಿತಿಯ ಅಧ್ಯಕ್ಷ ನ್ಯಾಯಮೂರ್ತಿ ವಿ.ಎಸ್. ಮಳಿಮಠ ಅವರು ವಾಚಿಸಿ ಭಕ್ತಿಯಿಂದ ಅರ್ಪಿಸಿದರು. ಪೂಜ್ಯ ಶ್ರೀಗಳವರನ್ನು ಅಭಿನಂದಿಸಿ ಸನ್ಮಾನಿಸುವಾಗ ಭಕ್ತರ ಕರತಾಡನ, ಜಯಘೋಷ ಮುಗಿಸಲು ಮುಟ್ಟಿತು. ಹಲವಾರು ಜನ ಭಕ್ತರು ತಾವು ತಂದಿದ್ದ ಹೂಗಳನ್ನು ವೇದಿಕೆಯತ್ತ ಅರ್ಪಿಸಿ ಧನ್ಯರಾದರು. ಈ ಅಪೂರ್ವ ಸಂಭ್ರಮದ ಸಂದರ್ಭದಲ್ಲಿ ರಾಷ್ಟ್ರಪತಿಗಳು, ರಾಷ್ಟ್ರಪತಿಗಳವರ ಪತಿ ಶ್ರೀ ದೇವಿಸಿಂಗ್ ಶೇಖಾವತ್,

ಶತಮಾನೋತ್ಸವ ಸಮಿತಿ ಅಧ್ಯಕ್ಷರಾದ ನ್ಯಾಯಮೂರ್ತಿ ಡಾ. ವಿ.ಎಸ್. ಮಳಿಮಠ ಅವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಕೃತಜ್ಞತಾ ಪತ್ರ ಸಮರ್ಪಣೆ





ದಿವ್ಯ ಸಾನ್ನಿಧ್ಯ ವಹಿಸಿದ್ದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರಿಂದ ನುಡಿ ನಮನ

ರಾಜ್ಯಪಾಲ ಶ್ರೀ ರಾಮೇಶ್ವರ ಠಾಕೂರ್, ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ, ವಿರೋಧ ಪಕ್ಷದ ನಾಯಕ ಶ್ರೀ ಮಲ್ಲಿಕಾರ್ಜುನ ಖರ್ಗೆ, ನ್ಯಾಯಮೂರ್ತಿ ಶಿವರಾಜ ಪಾಟೀಲ್, ಸಂಚಾಲಕ ಶ್ರೀ ವಿ. ಸೋಮಣ್ಣ ಅವರು ಉಪಸ್ಥಿತರಿದ್ದರು.

ರಾಜ್ಯಪಾಲರಾದ ಶ್ರೀ ರಾಮೇಶ್ವರ ಠಾಕೂರ್ ಅವರಿಂದ ಅಧ್ಯಕ್ಷ ಭಾಷಣ

**ವೇದಿಕೆಯ ಮುಂದೆ ಶ್ರೀಮಠದ ವಿದ್ಯಾರ್ಥಿಗಳು**

ಸ್ವಾಮೀಜಿಯವರು ಮಕ್ಕಳನ್ನು ಕಂಡಾಗ ಅವರಿಗಾಗುವ ಆನಂದ ಶಬ್ದಗಳಲ್ಲಿ ವರ್ಣಿಸಲಾಗದು. ಅಷ್ಟೊಂದು ಪ್ರೀತಿ, ವಾತ್ಸಲ್ಯ. ಅವರು ಮಕ್ಕಳಲ್ಲಿ ಮಕ್ಕಳಾಗಿಬಿಡುತ್ತಾರೆ. ಅವರೊಂದಿಗೆ ಮಾತನಾಡುವಾಗ ಹೊರ ಜಗತ್ತನ್ನೇ ಮರೆತು ಸಂಭ್ರಮಿಸುತ್ತಾರೆ. ಇದನ್ನು ಅರಿತ ಶತಮಾನೋತ್ಸವ ಸಮಿತಿಯ ಸಂಘಟಕರು ಸಮಾರಂಭದಲ್ಲಿ ಪ್ರತ್ಯೇಕವಾಗಿಯೇ ಸ್ಥಳವನ್ನು ವ್ಯವಸ್ಥೆ ಮಾಡಿದ್ದರು. ಪಂಚೆಯುಟ್ಟು, ಮೈಮೇಲೆ ಕೆಂಪು ವಸ್ತ್ರವನ್ನು ಹೊದ್ದು, ಹಣೆಗೆ ವಿಭೂತಿ ಧರಿಸಿ ಕುಳಿತಿದ್ದ ದೃಶ್ಯ ಅವಿಸ್ಮರಣೀಯ.

ಭಕ್ತ ಸಮೂಹ

**ಭಕ್ತರ ಬಳಿಗೆ ಪೂಜ್ಯ ಶ್ರೀಗಳು**

ತುಂಬಾ ದೂರದ ಊರುಗಳಿಂದ ಬಂದಿದ್ದ ಭಕ್ತರಿಗೆ ಸ್ವಾಮೀಜಿಯವರನ್ನು ಹತ್ತಿರದಿಂದ ದರ್ಶನಮಾಡಿ ಪುನೀತರಾಗ ಬೇಕೆಂಬ ಬಯಕೆ ಇದ್ದುದರಿಂದ ಈ ಸಮಾರಂಭದಲ್ಲಿ ವಿಶೇಷವಾದ ವ್ಯವಸ್ಥೆಯನ್ನು ಮಾಡಲಾಗಿತ್ತು. ಅದಕ್ಕಾಗಿ ವೇದಿಕೆಯ ಮುಂಭಾಗದಲ್ಲಿ ವಿಶೇಷವಾದ ಟ್ರಾಲಿ ವ್ಯವಸ್ಥೆ ಮಾಡಲಾಗಿತ್ತು. ಎಂಟು ಅಡಿ ಎತ್ತರದ ಈ ಟ್ರಾಲಿಯಲ್ಲಿ ಸ್ವಾಮೀಜಿಯವರನ್ನು ಕೂರಿಸಿ



ಶ್ರೀಮಠದ ವಿದ್ಯಾರ್ಥಿಗಳೊಂದಿಗೆ ರಾಷ್ಟ್ರಪತಿಗಳಿಂದ ಸಂವಾದ

ವೇದಿಕೆಯ ಮುಂಭಾಗದಿಂದ ಕೊನೆಯವರೆಗೂ ಟ್ರಾಲಿ ಹೋಗುವ ವ್ಯವಸ್ಥೆ ಮಾಡಿದ್ದರಿಂದ ಭಕ್ತರು ನಡೆದಾಡುವ ದೇವರನ್ನು ಹತ್ತಿರದಿಂದಲೇ ನೋಡುವ ಭಾಗ್ಯವನ್ನು ದೊರಕಿಸಿ ಕೊಟ್ಟಿದ್ದು ಭಕ್ತ ಸಮೂಹದಲ್ಲಿ ಹರ್ಷದ ಹೊನಲು ಹರಿಸಿತ್ತು.

ಮೂವತ್ತೈದು ಸಾವಿರ ರೂ. ವೆಚ್ಚದಲ್ಲಿ ನಿರ್ಮಾಣವಾಗಿರುವ ಈ ಟ್ರಾಲಿ ಕುರ್ಚಿ, ಗಣ್ಯರು ಕೂರುವ ವೇದಿಕೆಯಿಂದ ಹಿಡಿದು ಕೊನೆಯಲ್ಲಿ ಕುಳಿತಿರುವ ಭಕ್ತರಿಗೂ ಸ್ವಾಮೀಜಿಯವರ ದರ್ಶನ ಭಾಗ್ಯ ಲಭಿಸಿತು. ವೇದಿಕೆ ತುದಿಯಿಂದ ಆರಂಭಿಸಿ ಸಭಾಂಗಣದ ಕೊನೆಯವರೆಗೂ ೩೬೦ ಅಡಿ ಉದ್ದದ ರೈಲು ಹಳಿ ಮಾದರಿಯ ಹಳಿಗಳನ್ನು ನಿರ್ಮಿಸಿ ಟ್ರಾಲಿಯನ್ನು ಅಳವಡಿಸಲಾಗಿತ್ತು.

ಬೆಂಗಳೂರಿನ ವಿಎಸ್‌ಎಸ್ ಟ್ರಸ್ಟ್‌ನ ಯುವಕರ ತಂಡ ಈ ಸೇವೆಯನ್ನು ಒದಗಿಸುವ ಮೂಲಕ ಭಕ್ತರಿಗೆ ಅನುಕೂಲ ವಾಗುವಂತೆ ಮಾಡಿದುದನ್ನು ಭಕ್ತರು ತಂಡಕ್ಕೆ ತಮಗಾಗುವ ಸಂತೋಷವನ್ನು ವ್ಯಕ್ತಪಡಿಸುವುದರ ಮೂಲಕ ಅಭಿನಂದನೆಗಳನ್ನು ಸಲ್ಲಿಸಿದರು.

ಟ್ರಾಲಿಯ ಮೇಲ್ಭಾಗದಲ್ಲಿ ನಾಲ್ಕು ದಿಕ್ಕಿನೆಡೆಗೆ ತಿರುಗುವ ಕುರ್ಚಿಯನ್ನು ಅಳವಡಿಸಲಾಗಿತ್ತು. ಪೂಜ್ಯ ಶ್ರೀಗಳು ಟ್ರಾಲಿಯ ಮೇಲೆ ಬರುತ್ತಿರುವಾಗ ಭಕ್ತರು ತಮ್ಮ ಆಸನದಿಂದ ಮೇಲೆದ್ದು ಭಕ್ತಿ, ಗೌರವವನ್ನು ತೋರಿಸಿ ತಮ್ಮ ಜೀವನದ ಅವಿಸ್ಮರಣೀಯ ಘಟನೆಗಳಲ್ಲಿ ಒಂದನ್ನಾಗಿಸಿಕೊಂಡರು.

ರಾಷ್ಟ್ರಪತಿಗಳು ಸಮಾರಂಭದಿಂದ ನಿರ್ಗಮಿಸುವ ಮುನ್ನ ಶ್ರೀಮಠದ ವಿದ್ಯಾರ್ಥಿಗಳೊಂದಿಗೆ ಕೆಲವೊತ್ತು ಕಳೆದರು. ಅವರು ಸಂವಾದ ಕಾರ್ಯಕ್ರಮದಲ್ಲಿ ಭಾಗವಹಿಸಿ 'ನಿಮಗೆ ಸಿದ್ಧಗಂಗಾ ಮಠದಲ್ಲಿ ಒಳ್ಳೆಯ ಅವಕಾಶ ಸಿಕ್ಕಿದೆ. ಇದನ್ನು ನೀವು ಸದ್ಬಳಕೆ ಮಾಡಿಕೊಳ್ಳಬೇಕು. ಸಮಾಜದಲ್ಲಿ ಒಳ್ಳೆಯ ಪ್ರಜೆಗಳಾಗಿ ಬದುಕಬೇಕು. ಅವರ ಜೊತೆಗೆ ನಿಮ್ಮ ಸುತ್ತ ಮುತ್ತ ಇರುವ ಅನಕ್ಷರಸ್ಥ ಮಂದಿಗೆ ಸರಿ ಯಾವುದು ! ತಪ್ಪು ಯಾವುದು ಎನ್ನುವುದನ್ನು ಮನವರಿಕೆ ಮಾಡಿಕೊಡಬೇಕು' ಎಂದು ತಿಳಿಸಿದರು.

ಪ್ರಾರಂಭದಲ್ಲಿ ಶತಮಾನೋತ್ಸವ ಸಮಿತಿಯ ಸಂಚಾಲಕರು, ಮಾಜಿ ಸಚಿವರೂ, ಶಾಸಕರೂ ಆದ ಶ್ರೀ ವಿ. ಸೋಮಣ್ಣನವರು ಸರ್ವರನ್ನು ಸ್ವಾಗತಿಸಿ ಪ್ರಾಸ್ತಾವಿಕ ನುಡಿಗಳನ್ನಾಡಿದರೆ, ಶ್ರೀ ಎಸ್. ಷಡಕ್ಷರಿ ಅವರು ಕಾರ್ಯಕ್ರಮ ನಿರ್ವಹಣೆ ಮಾಡಿದರು. ಕಿರಿಯ ಶ್ರೀಗಳಾದ ಪೂಜ್ಯಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಶರಣು ಸಮರ್ಪಣೆ ಮಾಡಿದರು.





## SPEECH OF THE PRESIDENT OF INDIA, SMT. PRATIBHA DEVISINGH PATIL, AT THE INAUGURATION OF THE CENTENARY CELEBRATIONS OF KARNATAKA RATHNA DR. SREE SREE SIVAKUMARA SWAMIJI OF SREE SJODAGANGA MATH ON 02ND FEBRUARY 2009 AT TUMKUR.




I am happy to be in Tumkur and to have the opportunity to meet Dr. Sree Sree Sivakumara Swamiji, who has completed hundred years and spent his entire life in the service of mankind. He has been able to work so dedicatedly because of his strong adherence to self-discipline and his unwavering ,faith in humanity. He continues to remain sharp and agile, and still follows a rigorous work schedule.

Swamiji is a living illustration of the ancient philosophy of India, where work is considered to be worship. He has been working ceaselessly for the upliftment of the people, particularly the rural poor and the downtrodden. Performing work with this motivation is the need of the nation. If each one did their work with dedication and to the best of their ability, it would result in increased efficiency and better productivity as also in a better social environment. Whether it is students or teachers; doctors, engineers or scientists; officials or those working in the fields, factories or running their own enterprises - if all were to work devotedly what a difference it would make! Swamiji has correctly said that work is the prayer for the welfare of the world. I would call on all of you to make this a rule while going about your daily activities.

It is said in the Vedas that Vidya daan and Anna daan are admirable acts Knowledge removes ignorance and food banishes hunger, thus enriching a human being. Knowledge gives the ability to understand the purpose of life and food gives the physical nourishment

necessary to work towards that purpose. In fact, the basic objective of the UN Millennium Development Goals, adopted by all countries, is to remove widespread hunger and ignorance that is prevalent in the world. Work undertaken by the Siddaganga Math is an important contribution in the fight to free people from the scourge of poverty and hunger and to make their lives better through education.

I am informed that the Sree Siddaganga Education Society, established more than forty five years ago, is today running one hundred and thirty educational institutions. In the Gurukula, eight thousand students, mostly hailing from rural areas and coming from diverse communities, are provided free education, food and shelter. In the Sanskrit institute, Sanskrit is taught upto the post-graduation level, making it one of the few such institutions in the country. Besides, there are institutes of technology, industrial training, business management and also colleges of pharmacy, nursing and education. Thus, education is imparted in a range of disciples covering -not-only ancient studies but contemporary subjects as well.

All this has been possible because Swamiji, as the head of the Math established in the 15th century, is committed to carrying forward the tenets of a great spiritual legacy. This is also on account of Swamiji's background of being a graduate, who has studied physics and mathematics. It shows how magnificent results could come out, if spirituality and education work together. He thus, brings to the field of education the necessary experiences to impart education in various disciplines. I am confident that those who pass out from Siddaganga institutions will progress in life and become good citizens of India.

Educating our youth is an important responsibility. Swamiji looks at education as a debt to be paid by the present generation to the future generation. It should be our effort to work towards ensuring that all young boys and girls of India receive the gift of education that prepares them to be productive human beings, and imbibes in them a value system that will bring peace and harmony in the world and progress and prosperity to mankind. They should, from a young age, be taught about compassion and a caring attitude towards each other and showing respect towards elders. A person's conduct with others, often speaks about the upbringing and value system. Much importance is attached to the way we deal with others. Basavanna has summed this well in these words (It is heaven if you say - Sir, and it is hell if you say - you fellow)

The feeding of all pilgrims who come to this Math is a manifestation of our great tradition, which tells us that as you eat, see to it that others do not go hungry. The sharp rise in food prices last year has negatively impacted on efforts to eradicate poverty. It is estimated that an additional 1 00 million people now face the prospect of starvation. This brings me to the important topic of food security in the country and globally. The world population is growing. In the fifty years between 1950 and 2000, it grew from 2.5 billion to 6 billion and in the next fifty years, it is expected to rise to 9, billion. Even our population is growing at the rate of 2.1 percent per year: as per the last census in 2001. As China has stabilized its population, it is expected that we will surpass the population of China. Therefore, we may need to look at our population policy. Also, to feed this





population, we need to ensure that food availability is increased. That can only happen if food production and productivity are augmented. Productivity can be enhanced by making available to our farmers, better seeds, necessary irrigation facilities and marketing linkages. Scientists must constantly work with farmers to acquaint them with better agricultural practices and at the same time our research efforts in the field of agriculture must continue. We need to have another Green Revolution which will be an ever green revolution where agricultural production would be on a continuous upward curve. I am told that as a part of the Centenary celebrations, an agricultural conference is also being organized here, where I hope some of these issues are discussed.

In rural areas, particularly those which are located in far-flung areas, health and education facilities are limited. It is important to create awareness among the people on various socio- economic issues. I have often called on civil society and NGOs to go to villages for social work and to have regular and constant interaction with the local rural population. I would urge social workers to create awareness amongst the population living in rural areas, to extend them support in capacity building and to guide them about the various Government schemes designed for their welfare.

I once again convey my good wishes to the Sree Siddaganga Math and Swamiji. Their work for the welfare of humanity and promotion of goodwill between people is commendable. I end with a saying of Basavanna.

(One must have compassion towards all living beings. Compassion is the basis of all religions).

I hope the people of our country follow this message in their lives.

(God bless you).

(Thank You)

Jai Hind

## ಕನ್ನಡದ ರೂಪಾಂತರ

### ಭಾರತದ ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀಮತಿ ದೇವಿಸಿಂಗ್ ಪ್ರತಿಭಾ ಪಾಟೀಲ್‌ರವರು ಮಾಡಿದ ಇಂಗ್ಲೀಷ್ ಭಾಷಣದ ಕನ್ನಡ ರೂಪಾಂತರ.

೨೦೦೮ನೇ ಇಸವಿ, ಫೆಬ್ರವರಿ ಮಾಹೆ ೨ನೇ ದಿನಾಂಕದಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಆಚರಿಸಲಾದ ಕರ್ನಾಟಕರತ್ನ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಜನ್ಮಶತಮಾನೋತ್ಸವ ಸಮಾರಂಭದಲ್ಲಿ ಭಾರತದ ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀಮತಿ ದೇವಿಸಿಂಗ್ ಪ್ರತಿಭಾ ಪಾಟೀಲ್‌ರವರು ಮಾಡಿದ ಇಂಗ್ಲೀಷ್ ಭಾಷಣದ ಕನ್ನಡ ರೂಪಾಂತರ.

ಮಹಿಳೆಯರೇ ಮತ್ತು ಮಹನೀಯರೆ,

ಮಾನವನ ಸೇವೆಯಲ್ಲಿ ತಮ್ಮ ಇಡೀ ಜೀವನವನ್ನು ವ್ಯಯಿಸಿ ಒಂದು ಶತಮಾನವನ್ನು ಪೂರೈಸಿರುವ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ದರ್ಶನ ಪಡೆಯುವ ಅವಕಾಶಕ್ಕಾಗಿ ತುಮಕೂರಿಗೆ ಬರಲು ನನಗೆ ಅತೀವ ಸಂತೋಷವಾಗಿದೆ. ಅವರು ಅಷ್ಟೊಂದು ದೀಕ್ಷಾ ಬದ್ಧತೆಯಿಂದ ಕೂಡಿ ದೃಢವಾಗಿ ಕಾರ್ಯವೆಸಗಲು ಮುಖ್ಯಕಾರಣವೆಂದರೆ, ಅವರು ಅನುಸರಿಸುತ್ತಿರುವ ಶಿಸ್ತಿನ ಪಾಲನೆ ಮತ್ತು ಅವರಿಗೆ ಮಾನವೀಯತೆಯಲ್ಲಿರುವ ಅಚಲ ವಿಶ್ವಾಸ. ಅವರು ಚತುರ ಹಾಗೂ ತೀಕ್ಷ್ಣಮತಿಯುಳ್ಳವರಾಗಿದ್ದಾರೆ. ಹಾಗೂ ನಿಯಮಬದ್ಧ ಕಾರ್ಯಪಾಲನೆಯಲ್ಲಿ ಇಂದೂ ಸಹ ಮಗ್ನರಾಗಿದ್ದಾರೆ.

ಭಾರತದ ಪುರಾತನ ತತ್ತ್ವಸಿದ್ಧಾಂತದಲ್ಲಿ ನಮೂದಿಸಲ್ಪಟ್ಟಿರುವ ಕಾಯಕವೇ ನಿಜವಾದ ಆರಾಧನೆ ಎಂಬುದರ ಜೀವಂತ ಉದಾಹರಣೆ ಸ್ವಾಮೀಜಿಯವರು. ಜನರ, ಅದರಲ್ಲಿಯೂ ಹಳ್ಳಿಗಾಡಿನ ಬಡವರು ಮತ್ತು ತುಳಿಯಲ್ಪಟ್ಟವರ ಏಳಿಗೆಗಾಗಿ ಅವರು ನಿರಂತರ ಕ್ರಿಯಾಶೀಲರಾಗಿದ್ದಾರೆ. ಹೀಗೆ ಪ್ರೇರಣೆಯನ್ನು ಪಡೆದು ಕಾಯಕದಲ್ಲಿ ತೊಡಗುವುದು ನಾಡಿಗೆ ಅವಶ್ಯಕವಾಗಿ ಬೇಕಾಗಿದ್ದಾರೆ. ಪ್ರತಿಯೊಬ್ಬರೂ ತಮ್ಮ ತಮ್ಮ ಶಕ್ತ್ಯಾನುಸಾರ ತಮ್ಮ ತಮ್ಮ ಕೆಲಸವನ್ನು ತನ್ಮಯತೆಯಿಂದ ಮಾಡಿದರೆ, ಅದರ ಫಲ ಹೆಚ್ಚಿನ ದಕ್ಷತೆಯಲ್ಲಿ, ಉತ್ತಮವಾದ ಉತ್ಪಾದನೆಯಲ್ಲಿ ಹಾಗೂ ಒಳ್ಳೆಯ ಸಾಮಾಜಿಕ ವಾತಾವರಣವನ್ನುಂಟು ಮಾಡುವುದರಲ್ಲಿ ಫಲಪ್ರದವಾಗುತ್ತದೆ. ಅವರು ವಿದ್ಯಾರ್ಥಿಗಳಾಗಿರಬಹುದು, ಅಥವಾ ಶಿಕ್ಷಕರಿರಬಹುದು, ವೈದ್ಯರು, ಇಂಜಿನಿಯರುಗಳು, ಅಥವಾ ವಿಜ್ಞಾನಿಗಳಾಗಿರ ಬಹುದು, ಅಧಿಕಾರಿಗಳು ಅಥವಾ ಜಮೀನುಗಳಲ್ಲಿ ಕಾರ್ಖಾನೆಗಳಲ್ಲಿ ದುಡಿಯುವವರಿರಬಹುದು ಅಥವಾ ಸ್ವಂತ ಉದ್ಯೋಗಗಳನ್ನು ನಡೆಸುತ್ತಿರುವವರಾಗಿರಬಹುದು - ಎಲ್ಲರೂ ಆಸಕ್ತಿ ವಹಿಸಿ ದುಡಿದದ್ದೆ ಆದರೆ ಆಗ ಎಂತಹ ಬದಲಾದ ಸ್ಥಿತಿಯುಂಟಾಗುವುದು! ದುಡಿಯುವುದೇ ಜಗತ್ತಿನ ಒಳಿತಿಗಾಗಿ ಮಾಡುವ ಪ್ರಾರ್ಥನೆ ಎಂಬುದಾಗಿ ಸ್ವಾಮೀಜಿಯವರು ಸರಿಯಾಗಿ ಹೇಳಿದ್ದಾರೆ. ನಿತ್ಯದ ನಿಮ್ಮ ಕಾರ್ಯಕಲಾಪಗಳಲ್ಲಿ ಈ ತತ್ವವನ್ನು ಅಳವಡಿಸಿಕೊಳ್ಳಬೇಕೆಂದು ನಿಮ್ಮೆಲ್ಲರಿಗೂ ಕರೆ ಮಾಡುತ್ತೇವೆ.

ವಿದ್ಯಾದಾನ ಮತ್ತು ಅನ್ನದಾನ ಇವು ಅತ್ಯಂತ ಮಹತ್ವದ ಕಾರ್ಯಗಳೆಂದು ವೇದಗಳಲ್ಲಿ ಹೇಳಲ್ಪಟ್ಟಿದೆ. 'ಅನ್ನದಾನಂ ಪರಮ ದಾನಮ್, ವಿದ್ಯಾದಾನಂ ಅತಿಪರಮಂ'. ಜ್ಞಾನವು ಅಜ್ಞಾನವನ್ನು ತೊಲಗಿಸುತ್ತದೆ ಮತ್ತು ಆಹಾರ ಹಸಿವನ್ನು ಓಡಿಸುತ್ತದೆ. ಹೀಗೆ ಮನುಷ್ಯನನ್ನು ಶ್ರೀಮಂತಗೊಳಿಸುತ್ತವೆ. ಜ್ಞಾನ, ಜೀವನದ ಗುರಿಯನ್ನು ಅರಿತುಕೊಳ್ಳುವ ಸಾಮರ್ಥ್ಯವನ್ನು ಕೊಡುತ್ತದೆ ಮತ್ತು ಆಹಾರ ಅಂತಹ ಉದ್ದೇಶ ಸಾಧನೆಗೆ ಅವಶ್ಯಕವೆನಿಸಿದ ಕಾರ್ಯವೆಸಗಲು ಬೇಕಾದ ಪೋಷಣೆಯನ್ನು ಒದಗಿಸುತ್ತದೆ. ವಸ್ತು ಸ್ಥಿತಿ ಏನೆಂದರೆ, ಎಲ್ಲಾ ದೇಶಗಳೂ ಅಂಗೀಕರಿಸಿರುವ 'ಯು.ಎನ್. ಮಿಲೆನಿಯಮ್ ಡೆವಲಪ್‌ಮೆಂಟ್ ಗೋಲ್ಸ್'ನ ಮೂಲ ಉದ್ದೇಶ ಎಂದರೆ ಪ್ರಪಂಚದಲ್ಲಿ ಎಲ್ಲೆಡೆ ಹರಡಿರುವ ಹಸಿವು ಮತ್ತು ಅಜ್ಞಾನ ಇವುಗಳನ್ನು ತೊಡೆದುಹಾಕುವುದು. ಸಿದ್ಧಗಂಗಾ ಮಠವು ಕೈಗೊಂಡಿರುವ ಕಾರ್ಯ, ಬಡತನ ಮತ್ತು ಹಸಿವಿನ ಅನಾಹುತಗಳಿಂದ ಜನರನ್ನು ಉಳಿಸಲು ಅವರ ಜೀವನವನ್ನು ವಿದ್ಯೆಯ ಮೂಲಕ ಉತ್ತಮಗೊಳಿಸಲು ನಡೆಸುವ ಸಂಘರ್ಷಗಳಲ್ಲಿ ಒಂದು ಪ್ರಮುಖ ಕೊಡುಗೆಯಾಗಿದೆ.





ನಲವತ್ತೈದು ವರ್ಷಗಳಿಗೂ ಮುಂಚೆ ಅಸ್ತಿತ್ವಕ್ಕೆ ಬಂದ ಶ್ರೀ ಸಿದ್ಧಗಂಗಾ ಶಿಕ್ಷಣ ಸಂಸ್ಥೆ ಇಂದು ಒಂದು ನೂರ ಮೂವತ್ತು ವಿದ್ಯಾಲಯಗಳನ್ನು ನಡೆಸುತ್ತಿದೆ ಎಂದು ನನ್ನ ಗಮನಕ್ಕೆ ತಂದಿದ್ದಾರೆ. ಈ ಗುರುಕುಲದಲ್ಲಿ ಬಹುಮಂದಿ ಗ್ರಾಮೀಣ ಪ್ರದೇಶಗಳಿಂದ ಮತ್ತು ವಿವಿಧ ಮತಧರ್ಮಗಳಿಗೆ ಸೇರಿದ ಎಂಟು ಸಾವಿರ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ, ಆಹಾರ ಮತ್ತು ವಸತಿ ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ಸಂಸ್ಕೃತದ ಶಾಲೆಯಲ್ಲಿ ಪದವಿಯೇತ್ತರ ಹಂತದವರೆಗೂ ಸಂಸ್ಕೃತವನ್ನು ಕಲಿಸುವುದಲ್ಲದೆ, ದೇಶದಲ್ಲಿಯೇ ಇಂತಹ ಶಾಲೆಗಳಲ್ಲಿ ಒಂದನ್ನಾಗಿ ಮಾಡಲಾಗಿದೆ. ಇದರೊಂದಿಗೆಯೇ ತಾಂತ್ರಿಕ ಶಿಕ್ಷಣ ಶಾಲೆಗಳು, ಔದ್ಯೋಗಿಕ ತರಬೇತಿ ಸಂಸ್ಥೆಗಳು, ಕೈಗಾರಿಕಾ ತರಬೇತಿ ಶಾಲೆಗಳು, ವಾಣಿಜ್ಯಾಡಳಿತ ತರಬೇತಿ ಶಾಲೆ, ಮತ್ತು ಔಷಧವಿಜ್ಞಾನ (Pharmacy) ಕಾಲೇಜು, ಹಾಗೂ ಶುಶ್ರೂಷಕ (Nursing) ರ ಮತ್ತು ಶಿಕ್ಷಕರ ತರಬೇತಿ ಸಂಸ್ಥೆಗಳು ಇವೆ. ಹೀಗೆ ಶಿಕ್ಷಣವನ್ನು ಪ್ರಾಚೀನ ರಂಗವಲ್ಲದೆ ಸಮಕಾಲೀನ ರಂಗದಲ್ಲಿಯೂ ವಿವಿಧ ವಿಷಯಗಳಲ್ಲಿ ನೀಡಲಾಗುತ್ತಿದೆ.

ಇಷ್ಟೆಲ್ಲಾ ಸಾಧ್ಯವಾದುದು ಏಕೆಂದರೆ ಹದಿನೈದನೆಯ ಶತಮಾನದಲ್ಲಿ ಸ್ಥಾಪಿಸಲ್ಪಟ್ಟ ಮಠದ ಮುಖ್ಯಸ್ಥರಾಗಿ ಸ್ವಾಮೀಜಿಯವರು ತಮಗೆ ಬಳುವಳಿಯಾಗಿ ಬಂದ ಪಾರಮಾರ್ಥಿಕ ಸಿದ್ಧಾಂತಗಳನ್ನು ಮುಂದುವರಿಸಿಕೊಂಡು ಹೋಗಲು ಬದ್ಧಕಂಕಣರಾಗಿದ್ದಾರೆ. ಇದೂ ಸಹ ಸ್ವಾಮೀಜಿಯವರು ಭೌತಶಾಸ್ತ್ರ ಹಾಗೂ ಗಣಿತಶಾಸ್ತ್ರದ ಹಿನ್ನೆಲೆ ಪಡೆದು ಪದವೀಧರರಾಗಿರುವುದು. ಆಧ್ಯಾತ್ಮಿಕತೆ ಮತ್ತು ಶಿಕ್ಷಣ ಒಂದನ್ನೊಂದು ಪೂರಕವಾಗಿದ್ದರೆ, ಎಂತಹ ಅದ್ಭುತವಾದ ಫಲಿತಾಂಶವನ್ನು ಪಡೆಯಬಹುದೆಂಬುದನ್ನು ಇದು ತೋರಿಸುತ್ತದೆ. ಹೀಗೆ ಶಿಕ್ಷಣ ರಂಗದಲ್ಲಿ ಬೇರೆ ಬೇರೆ ಕ್ಷೇತ್ರಗಳಲ್ಲಿ ಶಿಕ್ಷಣವನ್ನು ನೀಡಲು ಅವಶ್ಯಕವೆನಿಸಿದ ಅನುಭವಗಳನ್ನು ಸ್ವಾಮೀಜಿಯವರು ವ್ಯವಸ್ಥೆಗೊಳಿಸಿರುತ್ತಾರೆ. ಸಿದ್ಧಗಂಗೆಯ ವಿದ್ಯಾಲಯಗಳಿಂದ ಹೊರಬರುವವರು ಜೀವನದಲ್ಲಿ ಅಭಿವೃದ್ಧಿ ಹೊಂದುವುದಲ್ಲದೆ ಭಾರತದ ಉತ್ತಮ ಪ್ರಜೆಗಳಾಗುವರೆಂಬುದರಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆ.

ನಮ್ಮ ಯುವಜನತೆಯನ್ನು ವಿದ್ಯಾವಂತರನ್ನಾಗಿ ಮಾಡುವುದು ಒಂದು ಪ್ರಮುಖ ಜವಾಬ್ದಾರಿಯಾಗಿದೆ. ಶಿಕ್ಷಣವೆಂಬುದು ಇಂದಿನ ಪೀಳಿಗೆ ಮುಂದಿನ ಪೀಳಿಗೆಗೆ ಕೊಡಬೇಕಾಗಿರುವ ಸಾಲದಂತೆ ಎಂಬುದು ಸ್ವಾಮೀಜಿಯವರ ದೃಷ್ಟಿಕೋನ. ಭಾರತದ ಎಲ್ಲಾ ಬಾಲಕ-ಬಾಲಕಿಯರೂ ಅವರನ್ನು ಅಭಿವೃದ್ಧಿಶೀಲ ಮಾನವರನ್ನಾಗಿ ಮಾಡುವ, ಜಗತ್ತಿನಲ್ಲಿ ಶಾಂತಿ ಸಮರಸಗಳನ್ನು ಮತ್ತು ಮಾನವ ಜನಾಂಗಕ್ಕೆ ಅಭಿವೃದ್ಧಿ ಮತ್ತು ಉತ್ಕರ್ಷವನ್ನುಂಟುಮಾಡುವ ಅಮೂಲ್ಯವಾದ ಮೌಲ್ಯಗಳನ್ನು ಅವರಲ್ಲಿ ವೃದ್ಧಿಸುವ ದಿಕ್ಕಿನಲ್ಲಿ ಕಾರ್ಯಪ್ರವೃತ್ತರಾಗುವ ಬಗ್ಗೆ ನಾವು ನಮ್ಮೆಲ್ಲ ಪ್ರಯತ್ನವನ್ನೂ ಮಾಡಬೇಕಿದೆ. ಎಳೆಯವರಿಂದಲೇ ಪರಸ್ಪರರಲ್ಲಿ ಅನುಕಂಪ ತೋರಿಸುವುದು ಮತ್ತು ಸಹಾಯವೆಸಗುವುದು ಮತ್ತು ಹಿರಿಯರ ಬಗ್ಗೆ ಗೌರವ ಮೊದಲಾದುವನ್ನು ಕಲಿಸಬೇಕು. ಅನೇಕ ವೇಳೆ ಒಬ್ಬ ವ್ಯಕ್ತಿ ಇತರರೊಡನೆ ಹೇಗೆ ನಡೆದುಕೊಳ್ಳುತ್ತಾನೆ ಎಂಬುದನ್ನು ಅವನ ನಡತೆಯಿಂದಲೇ ಅವನು ಬೆಳೆದಿರುವ ರೀತಿ ಮತ್ತು ಅವನ ಸ್ವಭಾವವನ್ನು ಗೊತ್ತುಮಾಡಿಕೊಳ್ಳಬಹುದು. ನಾವು ಬೇರೆಯವರೊಡನೆ ನಡೆದುಕೊಳ್ಳುವ ರೀತಿಗೆ ಹೆಚ್ಚು ಪ್ರಾಮುಖ್ಯತೆ ಬರುತ್ತದೆ. ಬಸವಣ್ಣನವರ ಈ ಪದಗಳಲ್ಲಿ ಅದನ್ನು ಬಹುಚೆನ್ನಾಗಿ ಕ್ರೋಢೀಕರಿಸಿದ್ದಾರೆ.

*ಅಯ್ಯಾ ಎಂದರೆ ಸ್ವರ್ಗ*
*ಎಲವೋ ಎಂದರ ನರಕ*

ನಮ್ಮ ಉನ್ನತವಾದ ಅನೂಚಾನವಾಗಿ ಬಂದ ಸಂಪ್ರದಾಯ ನಮಗೆ ಹೇಳುವುದೇನೆಂದರೆ, **"ನೀನು ಊಟಮಾಡುವುದ ರೊಂದಿಗೆ ಇತರರು ಹಸಿವಿನಿಂದ ಇರದಂತೆ ನೋಡಿಕೊ"**. ಮಠಕ್ಕೆ ಬರುವ ಎಲ್ಲಾ ಯಾತ್ರಾರ್ಥಿಗಳಿಗೂ ಊಟೋಪಚಾರ ನಡೆಸುವುದು ಇಲ್ಲಿನ ಸಂಪ್ರದಾಯ. ಈ ಹೇಳಿಕೆಯ ಮೂರ್ತರೂಪ. ಕಳೆದ ಸಾಲಿನಲ್ಲಿ ಉಂಟಾದ ಆಹಾರ ಪದಾರ್ಥಗಳ ಅಧಿಕ ಬೆಲೆ ಏರಿಕೆಯಿಂದಾಗಿ, ಬಡತನವನ್ನು ತೊಲಗಿಸುವ ದಿಸೆಯಲ್ಲಿ ದುಷ್ಪರಿಣಾಮ

ವನ್ನುಂಟು ಮಾಡಿದೆ. ಸದ್ಯದಲ್ಲಿ ಒಂದು ನೂರು ದಶಲಕ್ಷ ಮಂದಿ ಹಸಿವಿನ ಬಾಧೆಗೆ ಸಿಲುಕುವವರಾಗಿದ್ದು ಹೆಚ್ಚುವರಿಯಾಗಿ ಅಂದಾಜಿಸಲಾಗಿದೆ. ಇದರಿಂದ ದೇಶದಲ್ಲಿ ಹಾಗೂ ವಿಶ್ವದಾದ್ಯಂತ ಆಹಾರದ ರಕ್ಷಣೆಯ ಬಗ್ಗೆ ಮುಖ್ಯವಾದ ಅಂಶವೊಂದು ಗಮನವನ್ನು ಸೆಳೆದಿದೆ. ಪ್ರಪಂಚದಲ್ಲಿ ಜನಸಂಖ್ಯೆ ಬೆಳೆಯುತ್ತಿದೆ. ೧೯೫೦ ಮತ್ತು ೨೦೦೦ನೇ ಇಸವಿಯ ಮಧ್ಯದ ಐವತ್ತು ವರ್ಷಗಳಲ್ಲಿ ೨.೫ ಕೋಟಿಯಿಂದ ೬ ಕೋಟಿಯಷ್ಟು ವೃದ್ಧಿಯಾಗಿದ್ದು, ಮುಂದಿನ ಐವತ್ತು ವರ್ಷಗಳಲ್ಲಿ ಅದು ೯ ಕೋಟಿಗಳಾಗುವ ನಿರೀಕ್ಷೆ ಇದೆ. ೨೦೦೧ನೇ ಇಸವಿಯ ಜನಗಣತಿಯ ಪ್ರಕಾರ ನಮ್ಮ ಜನಸಂಖ್ಯೆಯೂ ಸಹ ವರ್ಷಕ್ಕೆ ೨.೧ ಪ್ರತಿಶತ ವೃದ್ಧಿಸುತ್ತದೆ. ಚೀನಾ ದೇಶ ತನ್ನ ಜನಸಂಖ್ಯೆಯನ್ನು ಸ್ಥಿರಗೊಳಿಸುವುದರಿಂದ, ನಮ್ಮ ಜನಸಂಖ್ಯೆ ಚೀನಾ ದೇಶದ ಸಂಖ್ಯೆಯನ್ನು ಮೀರುವ ಸಂಭವವಿದೆ. ಆದ್ದರಿಂದ ನಮ್ಮ ಜನಸಂಖ್ಯಾ ವಿಷಯದ ಧೋರಣೆಯ ಬಗ್ಗೆ ಗಮನಹರಿಸುವ ಅವಶ್ಯಕತೆ ಇದೆ. ಅದರೊಂದಿಗೆಯೆ ಈ ಜನಸಂಖ್ಯೆಗೆ ಒದಗಿಸಬೇಕಾದ ಆಹಾರಕ್ಕಾಗಿ, ಅದರ ಪೂರೈಕೆಯ ಕಡೆಗೂ ಗಮನಹರಿಸಬೇಕಾಗಿದೆ. ಆಹಾರ ಪದಾರ್ಥಗಳ ಉತ್ಪಾದನೆ ಮತ್ತು ತಯಾರಿಕೆ ಹೆಚ್ಚಾದರೆ ಮಾತ್ರ ಅದು ಸಾಧ್ಯ. ಉತ್ತಮವಾದ ಬೀಜ, ಆವ್ಯಕತೆಗೆ ತಕ್ಕಂತೆ ವ್ಯವಸಾಯ ಮಾಡಲು ಬೇಕಾದ ಅನುಕೂಲತೆ ಮತ್ತು ಮಾರಾಟ ಸಂಬಂಧ ಸಂಪರ್ಕ ಇವೆಲ್ಲ ನಮ್ಮ ರೈತರಿಗೆ ದೊರಕುವಂತೆ ಮಾಡುವುದರಿಂದ ಉತ್ಪಾದನೆಯನ್ನು ಹೆಚ್ಚಿಸಬಹುದು. ವಿಜ್ಞಾನಿಗಳು ಯಾವಾಗಲೂ ಕೆಲಸ ಮಾಡುವಾಗ ರೈತರೊಡನೆ ಸಂಪರ್ಕ ಹೊಂದಿದ್ದು ಅವರಿಗೆ ವ್ಯವಸಾಯದ ಬಗ್ಗೆ ಉತ್ತಮವಾದ ತಿಳುವಳಿಕೆ ನೀಡುತ್ತಿರಬೇಕು ಮತ್ತು ಹಾಗೆಯೇ ವ್ಯವಸಾಯ ಕ್ಷೇತ್ರದಲ್ಲಿನ ನಮ್ಮ ಪ್ರಯತ್ನಗಳ ಬಗ್ಗೆ ಸಂಶೋಧನೆಗಳು ಮುಂದುವರೆಯಬೇಕು. ನಮಗೆ ಮತ್ತೊಂದು ಹಸಿರು ಕ್ರಾಂತಿಯ ಆವಶ್ಯಕತೆಯಿದೆ. ಅದು ಶಾಶ್ವತ ಹಸಿರುಕ್ರಾಂತಿ ಎನಿಸಿದ್ದು, ಅದರಲ್ಲಿ ವ್ಯಾವಸಾಯಿಕ ಉತ್ಪನ್ನಗಳ ವಿವರ ನೀಡುವ ಅಭಿವೃದ್ಧಿ ರೇಖೆಯು ಒಂದೇ ರೀತಿ ಏರುತ್ತಿರಬೇಕು. ಈ ಶತಮಾನೋತ್ಸವದ ಭಾಗವಾಗಿ ವ್ಯಾವಸಾಯಿಕ ವಿಷಯಗಳ ಬಗ್ಗೆ ಮೇಳವೊಂದು ನಡೆಯಲಿದೆ ಎಂದು ಕೇಳಿದ್ದೇನೆ. ಈ ಕೆಲವು ಅಂಶಗಳನ್ನು ಅಲ್ಲಿ ಚರ್ಚಿಸುವರೆಂದು ಭಾವಿಸುತ್ತೇನೆ.

ಗ್ರಾಮೀಣ ಪ್ರದೇಶಗಳಲ್ಲಿ, ಅದರಲ್ಲಿಯೂ ದೂರ ದೂರ ಹರಡಿರುವ ಪ್ರದೇಶಗಳಲ್ಲಿ ಆರೋಗ್ಯ ಹಾಗೂ ಶೈಕ್ಷಣಿಕ ಸೌಲಭ್ಯಗಳು ಒಂದು ಪರಿಮಿತಿಗೊಳಪಟ್ಟಿರುತ್ತವೆ. ವಿವಿಧ ಸಾಮಾಜಿಕ-ಆರ್ಥಿಕ ವಿಷಯಗಳ ಬಗ್ಗೆ ಜನಗಳಲ್ಲಿ ಅರಿವನ್ನುಂಟುಮಾಡುವ ಅವಶ್ಯಕತೆಯಿದೆ. ಹಳ್ಳಿಗಳಿಗೆ ಹೋಗಿ ಸಾಮಾಜಿಕ ಸೇವೆ ಮತ್ತು ಸ್ಥಳೀಯ ಗ್ರಾಮಸ್ಥರೊಡನೆ ಏಕ ರೀತಿಯಾದ ಸಂಪರ್ಕ ಹೊಂದಿರಬೇಕೆಂದು ನಾನು ಅನೇಕ ಸಲ ಸಾಮಾಜಿಕ ಸಂಘ ಸಂಸ್ಥೆಗಳು ಹಾಗೂ ಎನ್.ಜಿ.ವೊ.ಗಳಿಗೆ ಕರೆಕೊಟ್ಟಿದ್ದೇನೆ. ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿರುವವರಲ್ಲಿ ಅರಿವನ್ನುಂಟುಮಾಡುವುದು, ಅವರಿಗೆ ಬೇಕಾದ ನೆರವನ್ನು ನೀಡುವುದು, ಅವರ ಒಳಿತಿಗಾಗಿ ಸರ್ಕಾರದವರು ಜಾರಿಗೊಳಿಸಿರುವ ವಿವಿಧ ಯೋಜನೆಗಳ ಬಗ್ಗೆ ನಿರ್ದೇಶನ ನೀಡುವುದು, ಇವೆಲ್ಲವುಗಳ ಬಗ್ಗೆ ತಿಳಿವಳಿಕೆಯನ್ನುಂಟು ಮಾಡುವಂತೆ ಸಮಾಜ ಸೇವಕರಿಗೆ ಸೂಚಿಸುತ್ತೇನೆ.

ಶ್ರೀ ಸಿದ್ಧಗಂಗಾ ಮಠ ಹಾಗೂ ಸ್ವಾಮೀಜಿಯವರಿಗೆ ಮತ್ತೊಮ್ಮೆ ನನ್ನ ಹಾರ್ದಿಕ ಶುಭಾಷಯಗಳು. ಮಾನವರ ಒಳಿತಿಗಾಗಿ ಮಾಡುತ್ತಿರುವ ಅವರ ಕಾಯಕ ಮತ್ತು ಜನರ ನಡುವೆ ಉತ್ತಮ ಬಾಂಧವ್ಯದ ಅಭಿವೃದ್ಧಿಗಾಗಿ ಪ್ರಯತ್ನ ಇವುಗಳು ಪ್ರಶಂಸಾರ್ಹವಾದವು. ಬಸವಣ್ಣನವರ ಒಂದು ಉಕ್ತಿಯೊಡನೆ ನಾನು ಮುಗಿಸುತ್ತೇನೆ.

ಎಲ್ಲಾ ಜೀವಕ್ಕೂ ದಯತೋರ್ವದೆ - ಧರ್ಮ
ದಯವೇ ಧರ್ಮದ ಮೂಲವಯ್ಯಾ

ನಮ್ಮ ನಾಡಿನ ಜನ ಈ ಸಂದೇಶವನ್ನು ತಮ್ಮ ಜೀವನದಲ್ಲಿ ಅನುಸರಿಸುವರೆಂದು ಭಾವಿಸುತ್ತೇನೆ.

ದೇವರು ನಿಮ್ಮೆಲ್ಲರಿಗೂ ಒಳ್ಳೆಯದನ್ನುಂಟುಮಾಡಲಿ, ವಂದನೆಗಳು. ಜೈ ಹಿಂದ್.

(ಕನ್ನಡಾನುವಾದ : ಶ್ರೀ ಟಿ.ಎಸ್. ರಾಮಚಂದ್ರರಾವ್)







ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರೂ, ತ್ರಿವಿಧ ದಾಸೋಹಿಗಳೂ ಆದ ಕರ್ನಾಟಕ ರತ್ನ, ಪರಮಪೂಜ್ಯ

## ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಶತಮಾನೋತ್ಸವ

೨, ೩ ಮತ್ತು ೪ನೇ ಫೆಬ್ರವರಿ, ೨೦೦೯

# ವಿಶ್ವಜ್ಯೋತಿಗೆ ಭಾವ ನಮನ

ಶತಾಯುಷಿಗಳಾದ ಕರ್ನಾಟಕ ರತ್ನ ಮಹಾನ್ ಕಾಯಕ ಯೋಗಿಗಳು, ಶಿವಯೋಗಿಗಳು ಆದ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ತ್ರಿವಿಧ ದಾಸೋಹಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮಶತಮಾನೋತ್ಸವ ದಿವ್ಯ ಸಮಾರಂಭದಲ್ಲಿ ಶ್ರೀ ಸುತ್ತೂರು ಮಠಾಧ್ಯಕ್ಷರಾದ ಶ್ರೀ ಜಗದ್ಗುರು ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಭಾರತದ ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀಮತಿ ಪ್ರತಿಭಾ ದೇವಿಸಿಂಗ್ ಪಾಟೀಲ್, ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ರಾಮೇಶ್ವರ ಠಾಕೂರ್ ಮತ್ತು ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳಾದ ಡಾ. ಬಿ.ಎಸ್. ಯಡಿಯೂರಪ್ಪ ಇವರೆಲ್ಲರ ಸಮ್ಮುಖದಲ್ಲಿ ಲಕ್ಷಾಂತರ ಭಕ್ತರ ಸಮಕ್ಷಮದಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ನಾಡಿನ ಜನತೆಯ ಪರವಾಗಿ ಸಲ್ಲಿಸಿದ "ಅಭಿವಂದನಾ ಪೂರ್ಣ" ಭಾವ ನಮನ.

ಶ್ರೀ ಸಿದ್ಧಗಂಗಾ ಮಠ ಕರ್ನಾಟಕದ ಒಂದು ಮಹಾನ್ ಪುಣ್ಯಕ್ಷೇತ್ರ. ಶ್ರೀಕ್ಷೇತ್ರದ ಪರಂಪರೆ ಅತ್ಯಂತ ಮಹಿಮಾಪೂರ್ಣ ಹಾಗೂ ಪರಮಪವಿತ್ರ. ತೋಂಟದ ಶ್ರೀ ಸಿದ್ಧಲಿಂಗೇಶ್ವರ ಯತಿಗಳ ತಪೋಭೂಮಿ. ಸುಮಾರು ೬೦೦ ವರ್ಷಗಳ ಹಿಂದೆ ಶ್ರೀ ಸಿದ್ಧಗಂಗಾ ಮಠದ ಸಂಸ್ಥಾಪನೆ. ಸ್ಥಾಪಿಸಿದ ಮಹಾನುಭಾವರು ಶ್ರೀ ಗೋಸಲ ಸಿದ್ಧೇಶ್ವರ ಯತಿಗಳು. ಶ್ರೀ ಗೋಸಲ ಸಿದ್ಧೇಶ್ವರರ ಅನಂತರ ಅನೇಕ ಮಹಾನ್ ಸಾಧಕರಿಂದ ಶ್ರೀ ಮಠದ ಕಾರ್ಯಕ್ಷೇತ್ರ ವಿಸ್ತೃತ. ಶ್ರೀ ಮಠಕ್ಕೆ ಉದ್ದಾನ ಶಿವಯೋಗಿಗಳವರ ತ್ರಿವಿಧ ದಾಸೋಹದ ದಿವ್ಯಸ್ಪರ್ಶ. ಶ್ರೀ ಮರುಳಾರಾಧ್ಯರ ನಂತರ ವಿರಕ್ತಾಶ್ರಮ ದೀಕ್ಷೆ ಪಡೆದು ೩-೩-೧೯೩೦ ರಿಂದ ಶ್ರೀಮಠಕ್ಕೆ ಅನುಪಮ ಸೇವೆ ಸಲ್ಲಿಸುವ ಭಾಗ್ಯ ಡಾ. ಶ್ರೀ ಶ್ರೀಗಳವರಿಗೆ ಲಭ್ಯ. ೧೧-೧-೧೯೪೧ ರಿಂದ ಶ್ರೀಮಠಕ್ಕೆ ಸಂಪೂರ್ಣ ಅಧಿಕಾರದ ಹೊಣೆಗಾರಿಕೆಯ ಮಹತ್ತರ ಜವಾಬ್ದಾರಿ. ಅಂದಿನಿಂದ ಇಂದಿನವರೆಗೆ ಡಾ. ಶ್ರೀ ಶ್ರೀಗಳವರ ಸೇವೆ ಪವಾಡ ಸದೃಶ. ಅದೊಂದು ವಿಸ್ಮಯ.

ಪವಿತ್ರ ಭಾರತದ ಪುಣ್ಯಭೂಮಿ ಕನ್ನಡ ನಾಡಿನಲ್ಲಿ ೧೯೦೮ ರಲ್ಲಿ ಶ್ರೀ ಹೊನ್ನೆಗೌಡರ ಮತ್ತು ಶ್ರೀಮತಿ ಗಂಗಮ್ಮ ದೈವಭಕ್ತಿ ದಂಪತಿಗಳಿಗೆ ಮಾಗಡಿ ತಾಲ್ಲೂಕಿನ ವೀರಾಪುರದಲ್ಲಿ ಜನಿಸಿದ ಶ್ರೀ ಶಿವಣ್ಣ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಾಗಿ ರೂಪುಗೊಂಡಿದ್ದು ಈ ನಾಡಿನ ಪುಣ್ಯ.

ಆಚಾರಕ್ಕೆ ಅರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು ಎನಕಂದ
ಜ್ಯೋತಿಯೆ ಆಗು ಜಗಕೆಲ್ಲ

ಎಂಬ ತಾಯಿ ಗಂಗಮ್ಮನವರ ಆಶಯ ಆಶೀರ್ವಾದದಂತೆ ಶ್ರೀ ಶಿವಣ್ಣ ನಿಜವಾದ ಜ್ಯೋತಿಯಾದರು ವಿಶ್ವಜ್ಯೋತಿಯಾದರು.

ಧರ್ಮ ಸಮನ್ವಯ, ಕಾಯಕ ನಿಷ್ಠೆ ಹಾಗೂ ದಾಸೋಹ ಸೇವೆ ಹಾಗೂ ಶಿಕ್ಷಣ ಪ್ರಸಾರ ಶ್ರೀ ಸಿದ್ಧಗಂಗಾ ಕ್ಷೇತ್ರದ ದಿವ್ಯ ಕಾರ್ಯಸೂಚಿ. ಅದರಂತೆಯೇ ತಮ್ಮ ಹಿರಿಯ ಶ್ರೀಗಳ ಕೃಪಾಶೀರ್ವಾದದಿಂದ ತ್ರಿವಿಧ ದಾಸೋಹವನ್ನು ಅರ್ಥಪೂರ್ಣವಾಗಿ ಒಂದು ತಪಸ್ಸಿನಂತೆ ನಡೆಸಿಕೊಂಡು ಬಂದ ಅನನ್ಯ ಸಾಧಕರಾದವರು ಪರಮಪೂಜ್ಯ ಡಾ. ಶ್ರೀ ಶ್ರೀಗಳವರು. ಶ್ರೀ ಸಿದ್ಧಗಂಗಾ ಕ್ಷೇತ್ರದ ಜಂಗಮಾಧಿಕಾರವನ್ನು ವಹಿಸಿಕೊಂಡ ನಂತರ ಶ್ರೀಕ್ಷೇತ್ರಕ್ಕೆ ಲೋಕಸೇವೆ ಮತ್ತು ಕಾಯಕ ನಿಷ್ಠೆಯ ಒಂದು ಹೊಸ ಭಾಷ್ಯವನ್ನೇ ಬರೆದ ಮಹಾನ್ ದಾರ್ಶನಿಕರಾದ ಡಾ. ಶ್ರೀ ಶ್ರೀಗಳವರು **"ಶಿಕ್ಷಣದಿಂದಲೇ ಮಾನವ ಕಲ್ಯಾಣ"**ವೆಂಬ ಸಂದೇಶಕ್ಕೆ ಪೂರಕವಾಗಿ ನೂರಾರು ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸುವ ಮೂಲಕ ಹಾಗೂ ಲಕ್ಷಾಂತರ ಜನರಿಗೆ ಅಕ್ಷರಾಭ್ಯಾಸಕ್ಕೆ ಆಶ್ರಯ ನೀಡುವ ಮೂಲಕ ಲಕ್ಷಾಂತರ ಬಡ ಮುಗ್ಧ ಮಕ್ಕಳ ಪಾಲಿಗೆ ಅವರೊಬ್ಬ ಅನಾಥ ಬಂಧು ಆಗಿದ್ದಾರೆ. ಪೂಜ್ಯ ಶ್ರೀಗಳವರಿಗೆ ಶರಣರ ತತ್ತ್ವ ಆದರ್ಶಗಳೇ ಉಚ್ಛ್ವಾಸ ನಿಶ್ವಾಸ ಇದ್ದಂತೆ. ಬಸವಣ್ಣನವರ ಆದರ್ಶಗಳೇ ಅವರ ಉಸಿರು. ಬಸವಣ್ಣನವರು ಎಂದರೆ ಅವರಿಗೆ ಒಂದು ರೋಮಾಂಚನದ

ಅನುಭವ. ಶರಣರ ಸಾಧನೆಯನ್ನು ಸದಾ ಸ್ಮರಿಸುವ ಅವರಿಗೆ ಶರಣರ ಚಿಂತನೆಗಳು ವಿಚಾರಧಾರೆಗಳು ಅವರ ನಿತ್ಯ ನಿರಂತರ ಸೇವಾ ಮನೋಭಾವಕ್ಕೆ ದಿವ್ಯಚೇತನ ನೀಡಿವೆ.

ಪೂಜ್ಯ ಶ್ರೀಗಳವರು ಕೇವಲ ಬೋಧಕರು ಅಲ್ಲ. ಅವರೊಬ್ಬ ಮಹಾನ್ ಸಾಧಕರು. ಅವರದು ಒಂದು ಪರಿಪೂರ್ಣ ಸಾಧನೆ. ಅವರು ಆಧ್ಯಾತ್ಮಿಕ ಯೋಗಿಗಳು. ಅನುಭವ ಸಿದ್ಧರು. ಶರಣ ಸಂಸ್ಕೃತಿ ಅವರ ನರನಾಡಿಗಳಲ್ಲಿ ಸದಾಕಾಲ ಸಂಚರಿಸುತ್ತಿರುತ್ತದೆ. ಶಿವಯೋಗಿ ಸಿದ್ಧರಾಮನ ಕಾಯಕಯೋಗ, ಅಲ್ಲಮಪ್ರಭುವಿನ ಆತ್ಮಜ್ಞಾನ, ಬಸವಣ್ಣನವರ ದಯೆ ಮತ್ತು ಅನುಕಂಪ, ಅಕ್ಕಮಹಾದೇವಿಯವರ ವೈರಾಗ್ಯಭಾವ, ಚೆನ್ನಬಸವಣ್ಣನವರ ಕಾರ್ಯಶೀಲತೆ ಹಾಗೂ ಇನ್ನಿತರ ನೂರಾರು ಶರಣ ಶ್ರೇಷ್ಠರ ವೈಚಾರಿಕ ಭಾವದ ಲೇಪ ಇವೆಲ್ಲದರ ಒಂದು ಮಹಾನ್ ಚೈತನ್ಯಮೂರ್ತಿಯೇ ಶ್ರೀ ಶ್ರೀಗಳು. ಅವರು ಕೇವಲ ಭಾವನಾ ಜೀವಿಗಳಲ್ಲ. ನೈಜ ಬದುಕಿನ ವಾಸ್ತವಿಕತೆಗಳಿಗೆ ತಮ್ಮನ್ನು ತಾವೇ ತೊಡಗಿಸಿಕೊಂಡವರು. ಅವರು ಆಡಂಬರಕ್ಕಾಗಿ ವಿರಕ್ತರಾಗಲಿಲ್ಲ. ಬದುಕಿನ ನೋವು ಸಂಕಷ್ಟ ಶೋಷಣೆಗಳ ವಿರುದ್ಧ ಸಿಡಿದು ನಿಂತ ವೀರ ವಿರಾಗಿಗಳು. ಶೀಲ ಚಾರಿತ್ರ್ಯ ಶಿಸ್ತುಗಳನ್ನು ಒಳಗೊಂಡ ಸೂಕ್ಷ್ಮಮನಸ್ಸು ಅವರದು.

ತ್ಯಾಗ ಮತ್ತು ಸೇವೆಗಳಿಗೆ ಉಜ್ವಲ ಸಾಕ್ಷಿಯಾಗಿ ಲೋಕ ಕಲ್ಯಾಣದ ಆದರ್ಶ ಮೂರ್ತಿಯಾಗಿ ಲಕ್ಷಾಂತರ ಜನ ಸಮುದಾಯಕ್ಕೆ ಆಧ್ಯಾತ್ಮಿಕ ಜ್ಯೋತಿಯಾಗಿ, ಸಾಂಪ್ರದಾಯಿಕ ಮತ್ತು ಅಧುನಿಕ ಚಿಂತನೆಗಳ ಸಮನ್ವಯಕಾರರಾಗಿ ದೇಶದ ನಾಡಿನ ಜ್ವಲಂತ ಸಮಕಾಲೀನ ಸಮಸ್ಯೆಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸುವ ಮೂಲಕ ನಿತ್ಯ ಬದುಕಿನೊಂದಿಗೆ ನಿರಂತರವಾಗಿ ಅನುಸಂಧಾನ ನಡೆಸುತ್ತಾ ಬಂದ ಶ್ರೀ ಶ್ರೀಗಳವರ ವ್ಯಕ್ತಿತ್ವ ಪರಿಪೂರ್ಣವಾದುದು.

"ದಯೆವೇ ಧರ್ಮದ ಮೂಲವಯ್ಯ" ಎಂಬ ಬಸವಣ್ಣನವರ ವಾಣಿಗೆ ದಿವ್ಯ ಉದಾಹರಣೆಯಾಗಿರುವ ಅವರ ಮಾತೃ ಹೃದಯ ಲೋಕಕ್ಕೆ ಆದರ್ಶವಾದದ್ದು. ಅಕ್ಕಮಹಾದೇವಿಯು ನಿರೂಪಿಸುವಂತೆ ನುಡಿ ಶುಚಿ, ನಡೆ ಶುಚಿ, ತನು ಶುಚಿ, ಮನ ಶುಚಿ, **ಭಾವ ಶುಚಿಗಳೆಂಬ ಪಂಚ ತೀರ್ಥಂಗಳ ಒಂದು ಸುಂದರ ಸಂಗಮ ಪರಮಪೂಜ್ಯರವರ ದೈವೀ ವ್ಯಕ್ತಿತ್ವ**

ಶ್ರೀಗಳವರ ಅಭಿಮಾನಿಗಳೊಬ್ಬರು ಹೇಳುವಂತೆ **"ಆಕಾಶಕ್ಕೆ ಆಕಾಶವೇ ಹೋಲಿಕೆ"** ಎಂಬಂತೆ ಶ್ರೀ ಶ್ರೀಗಳವರಿಗೆ ಅವರೊಬ್ಬರೇ ಹೋಲಿಕೆ. ಬೇರೊಂದು ಹೋಲಿಕೆ ಸಾಧ್ಯವೂ ಇಲ್ಲ, ಸಾಧುವೂ ಅಲ್ಲ. ಶ್ರೀ ಶ್ರೀಗಳವರದು ಆಧುನಿಕ ಮಹಾನ್ ಚಿಂತಕರ ಚಿಕಿತ್ಸಕ ಮನಸ್ಸು. ಬುದ್ಧ, ಮಹಾವೀರ, ಶ್ರೀ ರಾಮಕೃಷ್ಣ ಪರಮಹಂಸ, ಶ್ರೀ ವಿವೇಕಾನಂದರು, ಶ್ರೀ ಅರವಿಂದರು, ಮಹಾತ್ಮಗಾಂಧಿಯವರು, ಡಾ. ಎಸ್. ರಾಧಾಕೃಷ್ಣನ್‌ರವರು ಮುಂತಾದ ದಾರ್ಶನಿಕರ ತತ್ತ್ವಜ್ಞಾನದ ಸೆಳೆತವನ್ನು ಶ್ರೀ ಶ್ರೀಗಳವರಲ್ಲಿ ಕಾಣಬಹುದು. ಜಾಗತಿಕ ನೆಲೆಯಲ್ಲಿ ಮಹಾನ್ ಮಾನವತಾ ವಾದಿಗಳ ಚಿಂತನೆಯ ಪ್ರತಿರೂಪ ಶ್ರೀ ಶ್ರೀಗಳವರು.

ಶ್ರೀ ಅಟವಿ ಮಹಾಸ್ವಾಮಿಗಳವರು ಸುಮಾರು ೧೦೦ ವರ್ಷಗಳ ಹಿಂದೆ ಹೊತ್ತಿಸಿದ ದಾಸೋಹದ ಬೆಳಕನ್ನು ಮುಂದುವರಿಸಿಕೊಂಡು ಬಂದು ನಂತರ ತಮ್ಮ ಅವಧಿಯಲ್ಲಿ ಅದನ್ನು ಬೃಹತ್ತಾಗಿ ವಿಸ್ತರಿಸಿದ ದಿವ್ಯ ಮಾಂತ್ರಿಕರು ಪರಮಪೂಜ್ಯ ಶ್ರೀ ಶ್ರೀಗಳವರು. ಶ್ರೀ ಸಿದ್ಧಗಂಗಾ ಮಠ ಪೂಜ್ಯ ಶ್ರೀಗಳವರ ದಿವ್ಯ ದೂರದರ್ಶಿತ್ವದಿಂದ ಶಿಕ್ಷಣ, ವಿದ್ಯೆ, ಕೃಷಿ ಕೈಗಾರಿಕೆ, ಆರೋಗ್ಯ ಮತ್ತು ಅರಿವನ್ನು ಉಂಟು ಮಾಡುವ ಮೂಲಕ ಧರ್ಮ ಮತ್ತು ಸಂಸ್ಕೃತಿ ಪ್ರಸಾರ ಮಾಡುವ ಮೂಲಕ ನಾಡಿನಲ್ಲಿಯೇ ಒಂದು ಸಾಂಸ್ಕೃತಿಕ ಕೇಂದ್ರವಾಗಿರುವುದು ಅತ್ಯಂತ ಅಭಿನಂದನೀಯ ಹಾಗೂ ಪ್ರಶಂಸನೀಯ.

ನಾಡಿನ ಮತ್ತು ರಾಷ್ಟ್ರದ ಉದ್ದಗಲಕ್ಕೂ ಶರಣರ ವಿಚಾರಧಾರೆಗಳ ಪ್ರಸಾರದ ಮೂಲಕ ವಿಶ್ವಶಾಂತಿ ಸಂದೇಶದ ದಿವ್ಯ ಡಿಂಡಿಮ ಬಾರಿಸುತ್ತಾ ಜನರ ಹೃನ್ಮನಗಳಲ್ಲಿ ಗಾಢವಾಗಿ ಬೇರೂರಿರುವ ಶಿವಯೋಗಿಗಳಾದ ಡಾ. ಶ್ರೀ ಶ್ರೀಗಳವರನ್ನು **"ನಡೆದಾಡುವ ದೇವರು"** ಮತ್ತು **"ಅಭಿನವ ಬಸವಣ್ಣ"** ಎಂಬ ಅಭಿನಾಮದಿಂದ ಅವರನ್ನು ಆರಾಧಿಸುತ್ತಿರುವುದು ನಾಡಿನ ಜನತೆಗೆ ಅವರ ಮೇಲೆ ಇರುವ ಭಕ್ತಿ ನಂಬಿಕೆಗಳ ಸಂಕೇತವಾಗಿದೆ.

ಪರಮಪೂಜ್ಯ ಶ್ರೀಗಳವರಿಗೆ ನಾಡಿನ ಜನತೆ, ವಿಶ್ವವಿದ್ಯಾಲಯಗಳು ಮತ್ತು ಸರ್ಕಾರ ನೀಡಿರುವ ಪುರಸ್ಕಾರ ಹಾಗೂ ಸನ್ಮಾನಗಳು ಅಪರಿಮಿತವಾದವುಗಳು. ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿ, ಕರ್ನಾಟಕ ಸರ್ಕಾರದಿಂದ ಕರ್ನಾಟಕ ರತ್ನ ಪ್ರಶಸ್ತಿ ಇವುಗಳ ಜೊತೆಗೆ ನಾಡಿನಾದ್ಯಂತ ಲಕ್ಷಾಂತರ ಭಕ್ತರಿಂದ ಗುರುವಂದನೆಯ ಸ್ಮರಣೀಯ ಕಾರ್ಯಕ್ರಮಗಳ ಮೂಲಕ ಭಕ್ತಿ ಗೌರವಗಳ ಸಮರ್ಪಣೆ. ನೂರು ವರ್ಷಗಳ ಸಾರ್ಥಕ ಬದುಕನ್ನು ಪೂರ್ಣಗೊಳಿಸಿ ಇಂದಿಗೂ ಅತ್ಯಂತ ಚೈತನ್ಯದಾಯಕವಾಗಿ ಸ್ಫೂರ್ತಿಯ





ಸೆಲೆಯಾಗಿರುವ ಜಂಗಮ ಜ್ಯೋತಿಯಾದ ಶ್ರೀ ಶ್ರೀಗಳವರ ರಜತ ಮಹೋತ್ಸವ, ಸುವರ್ಣ ಮಹೋತ್ಸವ, ವಜ್ರ ಮಹೋತ್ಸವ ಮತ್ತು ಅಮೃತ ಮಹೋತ್ಸವಗಳ ಆಚರಣೆ ಮತ್ತು ಇದೀಗ ಶತಮಾನೋತ್ಸವದ ಭವ್ಯ ಆಚರಣೆ, ಒಬ್ಬ ಶರಣ ಸಾಧಕರಿಗೆ ಒಂದು ಜೀವಮಾನದಲ್ಲಿ ಸಲ್ಲುತ್ತಿರುವುದು ವಿಶ್ವದಲ್ಲಿಯೇ ಅವಿಸ್ಮರಣೀಯ.

ಒಂದು ಮಠದ ಪೀಠಾಧ್ಯಕ್ಷರಾಗಿ ಇದೇ ಮಾರ್ಚಿ ತಿಂಗಳಲ್ಲಿ ೮೦ ವರ್ಷ ಪೂರ್ಣಗೊಳಿಸುವ ಅವರ ಸಾಧನೆ ಒಂದು ವಿಕ್ರಮವೇ ಸರಿ. ಜಾತಿ, ಮತ, ಪಂಥಗಳ ಸೋಂಕಿಲ್ಲದೆ ಎಲ್ಲಾ ವರ್ಗದ, ವರ್ಣದ ವಿದ್ಯಾರ್ಥಿಗಳ ಪಾಲಿಗೆ ಆಶಾಕಿರಣವಾಗಿರುವ ಶ್ರೀ ಶ್ರೀಗಳವರ ಜಾತ್ಯಾತೀತ ನೀಲುವು ಲೋಕಕ್ಕೆ ಆದರ್ಶಮಯ.

ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯ
ಇವನಮ್ಮವ ಇವನಮ್ಮವ ಇವನಮ್ಮವ ಎಂದೆನಿಸಯ್ಯ

ಎಂಬ ಅಣ್ಣನವರ ವಾಣಿಯಂತೆ ವಿಶ್ವಭ್ರಾತೃತ್ವ ಹಾಗೂ ಮಾನವ ಧರ್ಮಗಳ ಮೌಲ್ಯಗಳ ಪ್ರತಿಪಾದಕರಾದ ಶ್ರೀಗಳವರು ವಿಶ್ವಧರ್ಮದ ಸಂಕೇತವಾಗಿದ್ದಾರೆ. ಅವರ ಅಧ್ಯಯನಶೀಲತೆ, ವೈಚಾರಿಕ ಚಿಂತನೆ ಹಾಗೂ ಅಪ್ರತಿಮವಾದ ಅಭಿವ್ಯಕ್ತಿ ಅನನ್ಯ.ಅವರ ಮಾತು ಮಂತ್ರವಿದ್ದಂತೆ. ಅದು ಮುತ್ತಿನಹಾರ. ಅದೊಂದು ಜ್ಯೋತಿರ್ಲಿಂಗ.

ನಾಡಿನ ಹಸಿವು, ಅಜ್ಞಾನ, ಅಂಧಕಾರಗಳನ್ನು ಕಳೆಯುವ ಮೂಲಕ ಮಾನವ ಧರ್ಮದ ದಾರಿದೀಪವಾಗಿ ವಿಶ್ವಜ್ಯೋತಿಯಾಗಿ ಬೆಳಗಿ ನಾಡಿನ ಜನತೆಗೆ ದಿವ್ಯಸ್ಫೂರ್ತಿ ನೀಡುತ್ತಾ ಬಂದಿರುವ ಶ್ರೀ ಶ್ರೀಗಳವರ ಶತಮಾನೋತ್ಸವದ ದಿವ್ಯ ಸಮಾರಂಭದ ನಡುವೆ ನಾವೆಲ್ಲರೂ ಇಂದು ಸಮಾವೇಶಗೊಂಡಿದ್ದೇವೆ. ನಾಡಿಗೆ ಪರಮಪೂಜ್ಯರು ಸಲ್ಲಿಸಿರುವ ವೈವಿಧ್ಯಮಯವಾದ ಹಾಗೂ ಪವಾಡ ಸದೃಶವಾದ ಸೇವೆಯನ್ನು ಸ್ಮರಿಸಿ ಕೃತಜ್ಞತಾ ಪೂರಕವಾಗಿ ಗೌರವಿಸುವ ಭಾಗ್ಯ ಇಂದು ನಮ್ಮ ಪಾಲಿಗೆ ಬಂದಿರುವುದು ನಮ್ಮೆಲ್ಲರ ಭಾಗ್ಯವೆಂದೇ ನಮ್ಮ ಭಾವನೆ.

ಶ್ರೀ ಸಿದ್ಧಗಂಗಾ ಕ್ಷೇತ್ರದ ಬಗ್ಗೆ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ರಾಷ್ಟ್ರಕವಿಗಳೂ ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳೂ ಆದ ಡಾ. ಜಿ.ಎಸ್. ಶಿವರುದ್ರಪ್ಪನವರು ವರ್ಣಿಸಿರುವ ರೀತಿ ಅಪೂರ್ವವಾದುದು.

*ಸದ್ದು ಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆಯೇರಿದೆ*
*ಕಾಯಕವೇ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ*
*ಕಾವಿಯುಡುಗೆಯನ್ನುಟ್ಟು ನಭವೇ ಕಿರಣ ಹಸ್ತವ ಚಾಚಿದೆ*
*ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರೆದಿದೆ.*

ನಾಡಿನ ಸಮಸ್ತ ಜನತೆಯ ಪರವಾಗಿ ಭಕ್ತಿಪೂರ್ವಕವಾಗಿ ವಿಶ್ವಜ್ಯೋತಿಗೆ ಭಾವ ನಮನವನ್ನು ಅಭಿನಂದನಾಪೂರ್ಣವಾಗಿ ಸಲ್ಲಿಸುತ್ತಾ ಪರಮಪೂಜ್ಯರವರು ಮತ್ತಷ್ಟು ದೀರ್ಘಕಾಲ ನಮ್ಮೊಡನೆ ಇದ್ದು ನಾಡಿಗೆಲ್ಲ ದಿವ್ಯಸ್ಫೂರ್ತಿ, ಚೈತನ್ಯವನ್ನು ನೀಡುವಂತಾಗಲೆಂದು ನಾಡಿನ ಜನತೆಯ ಪರವಾಗಿ ಸಾಷ್ಟಾಂಗ ಪ್ರಣಾಮಗಳೊಂದಿಗೆ ಹಾರೈಸುತ್ತೇನೆ.

ನ್ಯಾಯಮೂರ್ತಿ ಡಾ. ವಿ.ಎಸ್. ಮಳೀಮಠ
ಅಧ್ಯಕ್ಷರು
ಕರ್ನಾಟಕ ರತ್ನ, ಪರಮಪೂಜ್ಯ
ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ
ಶತಮಾನೋತ್ಸವ ಸಮಿತಿ

ದಿನಾಂಕ : ೨-೨-೨೦೦೯
ಸ್ಥಳ : ಶ್ರೀ ಸಿದ್ಧಗಂಗಾ ಮಠ
ತುಮಕೂರು

## ಗುರುವಂದನೆ




ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರಿಂದ "ಚಿತ್ರ ಜಂಗಮ" ಗ್ರಂಥದ ಲೋಕಾರ್ಪಣೆ

ಉದ್ಘಾಟನಾ ಸಮಾರಂಭ ಮುಗಿಯುತ್ತಿದ್ದಂತೆ ಯುಗಪುರುಷ, ತ್ರಿವಿಧ ದಾಸೋಹಮೂರ್ತಿ, ಕರ್ನಾಟಕರತ್ನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಗುರುವಂದನೆ ಸಲ್ಲಿಸುವ ಅಪೂರ್ವ ಕಾರ್ಯಕ್ರಮ ಪರಮಪೂಜ್ಯ ಶ್ರೀಗಳವರು ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು.

### ಚಿತ್ರ ಜಂಗಮ ಬಿಡುಗಡೆ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಹಾಗೂ ಕರ್ನಾಟಕ ಜಾನಪದ ಅಕಾಡೆಮಿ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರ ಪ್ರಧಾನ ಸಂಪಾದಕತ್ವದಲ್ಲಿ ಹೊರತಂದ ಡೆಮ್ಮಿ ೧/೪ ಆಕಾರದ ಸುಮಾರು ೧೫೦೦ಕ್ಕೂ ಹೆಚ್ಚು ಛಾಯಾಚಿತ್ರಗಳನ್ನೊಳಗೊಂಡ ಬಹುವರ್ಣದಲ್ಲಿ ಮುದ್ರಿತವಾದ ೪೫೦ ಪುಟಗಳ 'ಚಿತ್ರ ಜಂಗಮ' ಸಂಪುಟವನ್ನು ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಅವರು ಈ ಸಂದರ್ಭದಲ್ಲಿ ಮಾತನಾಡಿ ಇದೊಂದು ಅಪೂರ್ವ ಸಂಗ್ರಹ. ಈ ಸಂಪುಟವನ್ನು ಅವಲೋಕಿಸಿದರೆ ಪೂಜ್ಯ ಶ್ರೀಗಳವರ ದಿವ್ಯ ದರ್ಶನವಾಗುತ್ತದೆ ಎಂದು ಪ್ರಶಂಸಿಸಿದರು.

### ನುಡಿ ನಮನ

ಪೂಜ್ಯ ಶ್ರೀಗಳವರಿಗೆ ಗುರುವಂದನೆ ಸಲ್ಲಿಸಿದ ಅಖಿಲ ಭಾರತ ವೀರಶೈವ ಮಹಾಸಭಾದ ಅಧ್ಯಕ್ಷ ಶ್ರೀ ಭೀಮಣ್ಣ ಖಂಡ್ರೆ ಅವರು. "ಪ್ರಜಾ ಪ್ರಭುತ್ವದ ವ್ಯವಸ್ಥೆಯಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ ಇತ್ಯಾದಿ ವಿವಿಧ ಧರ್ಮಗಳಿಗೆ ಸೇರಿದ ಎಲ್ಲರೂ ಸಹೋದರರು. ಹಿಂದೆ ಅವರೆಲ್ಲರೂ ಒಟ್ಟಾಗಿ ಬಾಳಿ ಸುಖ ನೆಮ್ಮದಿಯಿಂದ ಇದ್ದರು. ಅವರಲ್ಲಿ ಯಾವುದೇ ರೀತಿಯ ಜಾತಿ ವೈಮನಸ್ಯ ಇರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಜಾತಿ, ಜಾತಿಗಳ ನಡುವೆ ವೈಮನಸ್ಸು, ಭಯೋತ್ಪಾದನೆ ಹೆಚ್ಚುತ್ತಿದೆ. ಇವುಗಳನ್ನು ನಾವೀಗಲೇ ಚಿವುಟದೇ ಇದ್ದರೆ ಇನ್ನು ೨೦ ವರ್ಷಗಳಲ್ಲಿ ನಮ್ಮ ದೇಶ ಅಧಃಪತನದತ್ತ ಸಾಗುತ್ತಿದೆ ಹಾಗಾಗಲು ಬಿಡುವುದು ಬೇಡ" ಎಂದು ಕಳಕಳಿಯಿಂದ ನುಡಿದರು.








ಅಖಿಲ ಭಾರತ ವೀರಶೈವ ಮಹಾಸಭಾದ ಅಧ್ಯಕ್ಷರಾದ ಶ್ರೀ ಭೀಮಣ್ಣ ಖಂಡ್ರೆಯವರಿಂದ ನುಡಿನಮನ



ಪೂಜ್ಯ ಶ್ರೀ ಶ್ರೀಗಳವರಿಂದ ಶ್ರೀ ಭೀಮಣ್ಣ ಖಂಡ್ರೆಯವರಿಗೆ ಆಶೀರ್ವಾದ



ಸಂಸದ ಶ್ರೀ ಎಸ್. ಮಲ್ಲಿಕಾರ್ಜುನಯ್ಯರವರಿಗೆ ಸುತ್ತೂರು ಶ್ರೀ ಶ್ರೀಗಳವರಿಂದ ಆಶೀರ್ವಾದ

ಪರಮಪೂಜ್ಯ ಶ್ರೀಗಳವರು ಕಳೆದ ಎಂಟು ದಶಕಗಳಿಂದ ನಾಡಿಗೆ, ರಾಷ್ಟ್ರಕ್ಕೆ ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ಹೃದಯತುಂಬಿ ಸ್ಮರಿಸಿದ ಶ್ರೀ ಭೀಮಣ್ಣ ಖಂಡ್ರೆ ಅವರು ಪರಮಪೂಜ್ಯ ಶ್ರೀ ಶ್ರೀಗಳವರ ಮಧ್ಯೆ ಇದ್ದು ಅವರ ದರ್ಶನ ಮಾಡುತ್ತಿರುವ ಅವಕಾಶ ದೊರಕಿರುವುದು ನಮ್ಮ ಪೂರ್ವಜನ್ಮದ ಪುಣ್ಯ ಎಂದರು.

ರಾಷ್ಟ್ರಕ್ಕಿಂತ ಧರ್ಮ ದೊಡ್ಡದಲ್ಲ, ಮೊದಲು ರಾಷ್ಟ್ರ ನಂತರ ಧರ್ಮ. ಆದರೆ ಧರ್ಮ-ಧರ್ಮಗಳು ಹಾಗೂ ಜಾತಿ, ಜಾತಿಗಳ ನಡುವೆ ಸಂಘರ್ಷಗಳು ಉಂಟಾಗುತ್ತಿದ್ದು ಅದರೊಂದಿಗೆ ಅನ್ಯಾಯ, ಅನೀತಿ, ಭ್ರಷ್ಟಾಚಾರ ನಿರಂತರವಾಗಿ ನಡೆಯುತ್ತಿರುವುದರಿಂದ ದೇಶ ಉಳಿಯುವುದಾದರೂ ಹೇಗೆ ಎಂದು ಪ್ರಶಂಸಿಸಿದರು.

ಹೃದಯರೋಗ ತಜ್ಞರಾದ ಡಾ. ವಿಜಯಲಕ್ಷ್ಮೀ ಬಾಳೆಕುಂದ್ರಿ ಅವರು ಮಾತನಾಡಿ ಪರಮಪೂಜ್ಯ ಶ್ರೀಗಳರು ಕಾಯಕ-ದಾಸೋಹ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಸೇವೆ ಅನನ್ಯ ಎಂದರು.

### ಗುರುರಕ್ಷೆ

ಇಡೀ ಸಂದರ್ಭದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ನೈಸ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಅಶೋಕ ಖೇಣಿ, ಕರ್ನಾಟಕ ಬ್ಯಾಂಕ್ ಅಧ್ಯಕ್ಷರಾದ ಶ್ರೀ ಅನಂತಕೃಷ್ಣ, ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ, ಜರಗನಹಳ್ಳಿ ಜಮೀನ್ದಾರರಾದ ಶ್ರೀ ಆರ್. ನಾರಾಯಣಸ್ವಾಮಿರೆಡ್ಡಿ ಅವರನ್ನು ಪರಮಪೂಜ್ಯ ಶ್ರೀಗಳು ಶಾಲು ಹೊದಿಸಿ ಫಲ ತಾಂಬೂಲ ಹಾಗೂ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು.

### ಶ್ರೀಗಳು ಸೂಫಿ ಪರಂಪರೆಯ ಕೊಂಡಿ

ಗುರುವಂದನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ರಾಜ್ಯಸಭೆ ಉಪಾಧ್ಯಕ್ಷರಾದ ಶ್ರೀ ಕೆ. ರೆಹಮಾನ್ ಖಾನ್ ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ 'ಪೂಜ್ಯಶ್ರೀಗಳು ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸುತ್ತಿರುವ ಸೇವೆಯನ್ನು ಮುಕ್ತಕಂಠದಿಂದ ಪ್ರಶಂಸಿಸಿ, ಪೂಜ್ಯ ಶ್ರೀಗಳು ಸೂಫಿ, ಸಂತರ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಂಡು ಸಮಾಜಕ್ಕೆ ಆದರ್ಶಪ್ರಾಯರಾಗಿದ್ದಾರೆ' ಎಂದು ನುಡಿದರು. ಅವರು ತಮ್ಮ ಭಾಷಣದಲ್ಲಿ ಅನೇಕ ಸಾಧು ಸಂತರು ಸಮಾಜದ ಏಳಿಗೆಗಾಗಿ ಶ್ರಮಿಸಿದ್ದಾರೆ. ಆದರೆ ಪೂಜ್ಯ ಶ್ರೀಗಳು ಸಮಾಜದ ಎಲ್ಲ ವರ್ಗದ ಜನರಿಗೆ ವಿದ್ಯಾದಾನ ಮಾಡುತ್ತಿರುವುದು ಪ್ರಶಂಸನೀಯ' ಎಂದರು.

ಇಂದು ಪರಿಪೂರ್ಣ ಜ್ಞಾನ ಮತ್ತು ಮಾನವೀಯ ಮೌಲ್ಯಗಳ ಮೂಲಕ ಸಮಾಜದಲ್ಲಿ ಬೇರುಬಿಟ್ಟಿರುವ ಅನಿಷ್ಟಗಳನ್ನು ತೊಡೆದು ಹಾಕಬೇಕಾಗಿದೆ. ಶ್ರೀಗಳು ಬಸವಾದಿ ಶರಣರ ಕಾಯಕ ತತ್ತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಸಮಾಜದ ಕಲ್ಯಾಣಕ್ಕಾಗಿ ಶ್ರಮಿಸುತ್ತಿದ್ದಾರೆ ಶ್ರೀಗಳು ನಮ್ಮೊಂದಿಗೆ ಇನ್ನಷ್ಟು ಕಾಲ ಇದ್ದು ಸಮಾಜಕ್ಕೆ ಮಾರ್ಗದರ್ಶನ ನೀಡಲಿ' ಎಂದರು.

### ಭಕ್ತಿ ಸಮರ್ಪಣೆ

ಶ್ರೀಮಠದ ಉತ್ತರಾಧಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ನಮ್ಮ ತಮ್ಮ ಭಕ್ತ ನಮನಗಳಲ್ಲಿ 'ನಮ್ಮ ಗುರುವರ್ಯರು ಸಹಸ್ರಾರು ಮಕ್ಕಳ ಭವಿಷ್ಯ ರೂಪಿಸಲು ಹಗಲಿರುಳು ದುಡಿಯುತ್ತಿದ್ದಾರೆ. ಅವರಿಗೇ ಸದಾ ಮಕ್ಕಳದೇ ಚಿಂತೆ. ಯಾರಾದರೂ ವಿದ್ಯಾರ್ಥಿ ಅನಾರೋಗ್ಯದಿಂದ ನರಳುತ್ತಿರುವ ವಿಚಾರ ತಿಳಿದರೆ ನೊಂದುಕೊಳ್ಳುತ್ತಾರೆ. ಸೂಕ್ತ ಚಿಕಿತ್ಸೆಗೆ ವ್ಯವಸ್ಥೆ ಮಾಡಿ ವಿದ್ಯಾರ್ಥಿಯ ಬಗ್ಗೆ ನಿಗಾವಹಿಸುವಂತೆ ತಿಳಿಸುತ್ತಾರೆ. ಅವರ ಮಾತೃ ಹೃದಯ ಅವರ ತಪಶ್ಶಕ್ತಿ ನಮ್ಮನ್ನೆಲ್ಲಾ ಪೊರೆಯುತ್ತಿದೆ' ಎಂದು ನುಡಿದರು. ವೇದಿಕೆಯಲ್ಲಿ ಲೋಕಸಭಾ ಸದಸ್ಯರಾದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಶತಮಾನೋತ್ಸವ ಸಮಿತಿಯ ಸಂಚಾಲಕ ಶ್ರೀ ವಿ. ಸೋಮಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

### ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸುವರ್ಣ ಮಹೋತ್ಸವ ಮತ್ತು ಶ್ರೀಮಠದ ಸೇವಾ ಸಮಾವೇಶ

ದಿನಾಂಕ : ೨೧ ಮಧ್ಯಾಹ್ನ ಇಳಕಲ್ ಚಿತ್ತರಗಿ ಮಹಾಸಂಸ್ಥಾನ ಮಠದ ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸುವರ್ಣ ಮಹೋತ್ಸವ ಮತ್ತು ಶ್ರೀಮಠದ ಸೇವಾ ಸಮಾವೇಶ ಕಾರ್ಯಕ್ರಮ ನಡೆಯಿತು. ಶ್ರೀಮಠದ ಉತ್ತರಾಧಿಕಾರಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಕಾರ್ಯಕ್ರಮವನ್ನು ಉದ್ಘಾಟಿಸಿ ಚಾಲನ ನೀಡಿ ಶುಭ ಹಾರೈಸಿದರು. ಅಧ್ಯಕ್ಷತೆಯನ್ನು ಮೈಸೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ನಾಡೋಜ ಡಾ. ದೇ. ಜವರೇಗೌಡ ಅವರು ವಹಿಸಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಪ್ರೊ. ಎಸ್. ಬಸವಾರಾಧ್ಯ ಹಾಗೂ ಡಾ. ಸಿ. ಶಿವಕುಮಾರಸ್ವಾಮಿ ಅವರ ಸಂಪಾದಕತ್ವದಲ್ಲಿ ಸಿದ್ಧವಾದ 'ನೆನೆವ ಮನ' ಗ್ರಂಥವನ್ನು ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ



ಪೂಜ್ಯ ಶ್ರೀ ಶ್ರೀಗಳವರಿಂದ ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿಯವರಿಗೆ ಆಶೀರ್ವಾದ



ನೈಸ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಅಶೋಕ ಖೇಣಿ ರವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ



ಕೆ.ವಿ.ವಿ.ಎಸ್. ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ ರವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ







ಜಮೀನ್ದಾರರಾದ ಶ್ರೀ ಆರ್. ನಾರಾಯಣಸ್ವಾಮಿ ರೆಡ್ಡಿ ರವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ



ರಾಜ್ಯಸಭಾ ಉಪಸಭಾಪತಿಗಳಾದ ಶ್ರೀ ಕೆ.ಎಸ್. ರೆಹಮಾನ್ ಖಾನ್ ಅವರಿಂದ ಭಾಷಣ



ಶ್ರೀ ಕೆ.ಎಸ್. ರೆಹಮಾನ್ ಖಾನ್ ರವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ

ಅವರು ಲೋಕಾರ್ಪಣೆ ಮಾಡಿ 'ಶಿಕ್ಷಣ ಕ್ಷೇತ್ರದಲ್ಲಿ ಸರಕಾರ ಮಾಡಲಾಗದ ಸಾಧನೆಯನ್ನು ಶ್ರೀ ಸಿದ್ಧಗಂಗಾ ಮಠ ಮಾಡುತ್ತಾ ಬಂದಿದೆ. ಜ್ಞಾನ ಮತ್ತು ದಾಸೋಹ ಕ್ಷೇತ್ರದಲ್ಲಿ ಶ್ರೀಮಠ ಸಲ್ಲಿಸುತ್ತಿರುವ ಸೇವೆ ಇಡೀ ದೇಶಕ್ಕೆ ಮಾದರಿಯಾಗಿದೆ. ೯೦೦೦ ವಿದ್ಯಾರ್ಥಿಗಳಿಗೆ ಉಚಿತ ಊಟ, ವಸತಿ ವ್ಯವಸ್ಥೆ ಕಲ್ಪಿಸುವುದು ಸುಲಭವಲ್ಲ. ಪೂಜ್ಯ ಸ್ವಾಮೀಜಿಯವರ ಕತೃತ್ವ ಶಕ್ತಿಯ ಫಲವಾಗಿ ಶ್ರೀಮಠದಲ್ಲಿ ಅನುಷ್ಠಾನವಾಗಿದೆ. ಇಂದು ಶ್ರೀಮಠದಲ್ಲಿ ನಡೆಯುತ್ತಿರುವ ಶತಮಾನೋತ್ಸವ ಸಮಾರಂಭ ನಮ್ಮ ಜೀವಮಾನದಲ್ಲಿಯೇ ಒಂದು ಅವಿಸ್ಮರಣೀಯ ಘಟನೆ. ಶ್ರೀಮಠದಲ್ಲಿ ವ್ಯಾಸಂಗ ಲಕ್ಷಾಂತರ ವಿದ್ಯಾರ್ಥಿಗಳು ಇಂದು ದೇಶ ವಿದೇಶಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ವಿವಿಧ ಹುದ್ದೆಗಳಲ್ಲಿ ಶ್ರೀಗಳವರ ದಿವ್ಯಾಶೀರ್ವಾದದಿಂದ ಉತ್ತಮ ಸೇವೆ ಸಲ್ಲಿಸುತ್ತಿದ್ದಾರೆ.

ಇತ್ತೀಚೆಗೆ ಪರಕೀಯರನ್ನು ಅನುಕರಣೆ ಮಾಡುವ ಪ್ರವೃತ್ತಿ ಹೆಚ್ಚಾಗುತ್ತಿದೆ. ಅದರಲ್ಲೂ ನಾವು ಪರಕೀಯರ ಶಿಕ್ಷಣ ಪದ್ಧತಿಯನ್ನು ಅನುಕರಿಸುತ್ತಿದ್ದೇವೆ. ಇದರಿಂದ ಶಿಕ್ಷಣದಲ್ಲಿ ನೈತಿಕ ಮಟ್ಟ ಕುಸಿಯುತ್ತಿದೆ. ಲೌಕಿಕ ಶಿಕ್ಷಣದ ಜೊತೆಗೆ ಆಧ್ಯಾತ್ಮಿಕ, ಧಾರ್ಮಿಕ ಚಿಂತನೆಯ ಬಗ್ಗೆಯೂ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸಬೇಕಾಗಿದ್ದ ಈ ನಿಟ್ಟಿನಲ್ಲಿ ಭಾರತೀಯ ಶಿಕ್ಷಣ ಪದ್ಧತಿಯನ್ನು ಜಾರಿಗೆ ತರುವ ಅಗತ್ಯವಿದೆ. ಶ್ರೀಮಠದಲ್ಲಿ ಲೌಕಿಕ ಶಿಕ್ಷಣದ ಜೊತೆಗೆ ನೈತಿಕ ಶಿಕ್ಷಣವನ್ನು ನೀಡುತ್ತಿರುವುದು ಸಂತೋಷ ತಂದಿದೆ. ಪರಮಪೂಜ್ಯ ಶ್ರೀಗಳವರು ಸಮಾಜದ ಎಲ್ಲ ವರ್ಗದವರಿಗೂ ಆದರ್ಶಪ್ರಾಯದವರು. ಪೂಜ್ಯ ಶ್ರೀಗಳವರ ದರ್ಶನಭಾಗ್ಯ ನಮ್ಮ ಭಾಗ್ಯ ಎಂದರು.

### 'ನಡೆದು ಬಂದ ದಾರಿ' ಕೃತಿ ಬಿಡುಗಡೆ

ಕಳೆದ ಐವತ್ತು ವರ್ಷಗಳಿಂದ ಹಳೆಯ ವಿದ್ಯಾರ್ಥಿ ಸಂಘ ಕಾರ್ಯಚಟುವಟಿಕೆಗಳನ್ನೊಳಗೊಂಡ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಗಳೂ, ಶತಮಾನೋತ್ಸವ ಗ್ರಂಥ ಪ್ರಕಟಣಾ ಸಮಿತಿಯ ಪ್ರಧಾನ ಸಂಚಾಲಕರೂ ಆದ ಶ್ರೀ ಕೆ.ಎಚ್. ಶಿವರುದ್ರಯ್ಯನವರು ರಚಿಸಿದ 'ನಡೆದು ಬಂದ ದಾರಿ' ಕೃತಿಯನ್ನು ಶಿವರುದ್ರಯ್ಯನವರು ರಚಿಸಿದ ... ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರು ಬಿಡುಗಡೆ ಮಾಡಿ ಮಾತನಾಡಿ 'ವೀರಶೈವ ಧರ್ಮ ಒಂದು ಜೀವನ ಪದ್ಧತಿಯಾಗಿದ್ದು ಸಮಾಜದಲ್ಲಿ ಸಮಾನತೆ ಸಾರುವಲ್ಲಿ ವೀರಶೈವ ಮಠಗಳು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಮಾರ್ಗದರ್ಶನದಲ್ಲಿ ಶ್ರಮಿಸುತ್ತಿವೆ. ನೂರು ವಸಂತಗಳು ಸಾರ್ಥಕ ಜೀವನ ನಡೆಸಿದ್ದಾರೆ. ಅವರು ಕರ್ನಾಟಕ ರತ್ನ, ಭಾರತ ರತ್ನ,

ನೋಬಲ್ ಪ್ರಶಸ್ತಿಗಳಿಗಿಂತ ಮಿಗಿಲಾದ ಅಮೂಲ್ಯ ರತ್ನವಾಗಿದ್ದಾರೆ ಎಂದು ಶ್ಲಾಘಿಸಿದರು.

### ನೂರೆಂಟು ಕೃತಿಗಳ ಬಿಡುಗಡೆ

ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ಅಧ್ಯಕ್ಷರಾಗಿರುವ ಶತಮಾನೋತ್ಸವ ಪ್ರಕಟಣಾ ಸಮಿತಿಯಿಂದ ಡಾ. ಎಸ್.ಎಂ. ವೃಷಭೇಂದ್ರಸ್ವಾಮಿ ಅವರ ಪ್ರಧಾನ ಸಂಪಾದಕರಾಗಿ, ಪ್ರೊ. ಟಿ.ಆರ್. ಮಹಾದೇವಯ್ಯ, ಡಾ. ಎಂ.ಜಿ. ನಾಗರಾಜ್ ಮತ್ತು ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರ ಸಂಪಾದಕತ್ವದಲ್ಲಿ ಹೊರತಂದ ಜ್ಞಾನ ದಾಸೋಹ ಮಣಿಮಾಲೆಯಡಿ ೧೦೮ ವಿವಿಧ ವಿಷಯಗಳನ್ನೊಳಗೊಂಡ ನೂರಾ ಎಂಟು ಕೃತಿಗಳನ್ನು ಸಣ್ಣ ನೀರಾವರಿ, ಯೋಜನೆ ಅಂಕಿ-ಅಂಶ ಇಲಾಖಾ ಸಚಿವರಾದ ಶ್ರೀ ಗೋವಿಂದ ಎಂ. ಕಾರಜೋಳ, ಸಚಿವ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ, ಮಾಜಿ ಸಚಿವ ಶ್ರೀ ಸಿ. ಚನ್ನಿಗಪ್ಪ ಅವರು ಲೋಕಾರ್ಪಣೆ ಮಾಡಿದರು.

ಕೃತಿಗಳನ್ನು ಲೋಕಾರ್ಪಣೆ ಮಾಡಿ ಮಾತನಾಡಿದ ಗಣ್ಯರು ಇದೊಂದು ಅಪೂರ್ವ ದಾಖಲೆ. ಇತಿಹಾಸದಲ್ಲಿ ಶಾಶ್ವತವಾಗಿ ಉಳಿಯುವಂತ ಮಹತ್ಕಾರ್ಯ ಇದಾಗಿದೆ. ಸಮಾರಂಭದಲ್ಲಿ ಮಾದರಿ ಉಪನ್ಯಾಸಗಳು, ಇವೆಲ್ಲವೂ ಕಾಲ ಕಳೆದಂತೆ ಮರೆತು ಹೋಗುತ್ತದೆ. ಆದರೆ ಈ ಕೃತಿಗಳು ಮಾತ್ರ ನೂರಾರು ವರ್ಷ ನಮ್ಮೊಂದಿಗಿರುವ ದಾರಿದೀಪವಾಗುತ್ತವೆ ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.




ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ಪ್ರಧಾನ ಕಾರ್ಯದರ್ಶಿ ಡಾ. ಎಂ.ಎನ್. ಚನ್ನಬಸಪ್ಪ ಅವರಿಂದ ಪ್ರಾಸ್ತವಿಕ ನುಡಿ

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಲೋಕಸಭಾ ಸದಸ್ಯ ಶ್ರೀ ಜಿ.ಎಂ. ಸಿದ್ಧೇಶ್ ಅವರು ಮಾತನಾಡಿ "ಮಠಗಳಿಂದಲೇ ಜ್ಞಾನ, ಅನ್ನ ದಾಸೋಹದ ಪರಂಪರೆ ಬೆಳೆದು ಬಂದಿದೆ. ಅಂತಹ ಸೇವೆ ಸಲ್ಲಿಸುತ್ತಿರುವ ಮಠಗಳಿಗೆ ಅನುದಾನ ನೀಡಿದರೆ ಟೀಕೆ ಮಾಡುವುದು ಸರಿಯಲ್ಲ" ಎಂದರು.




ಗಣ್ಯರಿಂದ "ನೆನವ ಮನ" ಗ್ರಂಥದ ಲೋಕಾರ್ಪಣೆ







ಜ್ಞಾನದಾಸೋಹ ಮಣಿಮಾಲೆಯ ೧೦೮ ಕೃತಿಗಳ ಲೋಕಾರ್ಪಣೆ

ಮಾಜಿ ಸಚಿವ ಶ್ರೀ ಅಲ್ಲಂ ವೀರಭದ್ರಪ್ಪನವರು ಮಾತನಾಡಿ 'ಶ್ರೀಮಠ ಸಲ್ಲಿಸುತ್ತಿರುವ ಅಮೂಲ್ಯಸೇವೆ ಇತರ ಮಠಗಳಿಗೆ ಮೇಲ್ಪಂಕ್ತಿಯಾಗಿದೆ. ಪೂಜ್ಯ ಶ್ರೀಗಳವರು ಬಸವಾದಿ ಶರಣರ ಆದರ್ಶಗಳನ್ನು ಶ್ರೀಮಠದಲ್ಲಿ ಸಾಕಾರಗೊಳಿಸಿದ್ದಾರೆ' ಎಂದರು.

ಮುಜರಾಯಿ ಸಚಿವ ಶ್ರೀ ಎಸ್.ಡಿ. ಕೃಷ್ಣಯ್ಯ ಶೆಟ್ಟಿ ಅವರು ಮಾತನಾಡಿ 'ಪರಮಪೂಜ್ಯ ಶ್ರೀಗಳವರು ಈ ಶತಮಾನ ಕಂಡ ಮಹಾತಪಸ್ವಿಗಳು ಗ್ರಾಮೀಣ ಬಡಮಕ್ಕಳ ಪಾಲಿಗೆ ಕಲ್ಪವೃಕ್ಷ' ಎಂದರು.

ಧಾರವಾಡ ವಿಶ್ವವಿದ್ಯಾನಿಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಡಾ. ಎಸ್.ಎಂ. ವೃಷಭೇಂದ್ರ ಸ್ವಾಮಿ ಅವರು 'ಶ್ರೀಮಠದ ಸಾಂಸ್ಕೃತಿಕ ಚಟುವಟಿಕೆಗಳು' ಕುರಿತು ವಿಚಾರ ಮಂಡನೆ ಮಾಡಿ ಪೂಜ್ಯ ಶ್ರೀಗಳವರ ಸೇವಾ ಮಣಿಹವನ್ನು ಪ್ರಶಂಸಿಸಿ ಶ್ರೀಮಠದ ಸಾಂಸ್ಕೃತಿಕ ಚಟುವಟಿಕೆಗಳ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟರು.

ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ಕರ್ನಾಟಕ ವಿಧಾನ ಪರಿಷತ್ತು ವಿರೋಧಪಕ್ಷದ ನಾಯಕರೂ ಆದ ಶ್ರೀ ವಿ.ಎಸ್. ಉಗ್ರಪ್ಪನವರು 'ಶ್ರೀಮಠದ ಶೈಕ್ಷಣಿಕ ಚಟುವಟಿಕೆಗಳು' ವಿಷಯವನ್ನು ಕುರಿತು ಮಾತನಾಡಿ ಶ್ರೀಮಠದಲ್ಲಿ 'ನಮ್ಮಂತ ಗ್ರಾಮೀಣ ಪ್ರದೇಶದಿಂದ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಿ ಶಿಕ್ಷಣ ನೀಡದಿದ್ದರೆ ಶಿಕ್ಷಣದಿಂದ ವಂಚಿತರಾಗುತ್ತಿದ್ದೆವು. ಪೂಜ್ಯ ಶ್ರೀಗಳವರು ಮಕ್ಕಳ ಮೇಲಿಟ್ಟಿರುವ ಪ್ರೀತಿ ವಾತ್ಸಲ್ಯದ ಸವಿಯನ್ನು ಅನುಭವಿಸಿದವರಲ್ಲಿ ನಾನೂ ಒಬ್ಬ. ಶ್ರೀಮಠಕ್ಕೆ, ಪೂಜ್ಯರಿಗೆ ನಾನು ಸದಾ ಕೃತಜ್ಞನಾಗಿದ್ದೇನೆ' ಎಂದರು.

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರೂ, ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ ಆದ ಮುಖ್ಯಮಂತ್ರಿ ಚಂದ್ರು ಅವರು 'ಶ್ರೀಮಠದ ಸಾಮಾಜಿಕ ಚಟುವಟಿಕೆಗಳು' ಕುರಿತು ಮಾತನಾಡಿ ಮೂರು ವರ್ಷಗಳ ಕಾಲ ತಾವು ಶ್ರೀಮಠದಲ್ಲಿ ಕಳೆದ ದಿನಗಳ ಅನುಭವವನ್ನು ಹಂಚಿಕೊಂಡರು.

ಮೈಸೂರಿನ ನ್ಯಾಯವಾದಿಗಳೂ, ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ ಆದ ಶ್ರೀ ಹೆಚ್. ಗಂಗಾಧರನ್ ಅವರು 'ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳ ಸಂಘ'ವನ್ನು ಕುರಿತು ಮಾತನಾಡಿ, ಕಳೆದ ಐವತ್ತು ವರ್ಷಗಳಿಂದ ಸಂಘ ಸಲ್ಲಿಸುತ್ತಿರುವ



ಸೇವೆಯನ್ನು ಮುಕ್ತ ಕಂಠದಿಂದ ಶ್ಲಾಘಿಸಿದರು. ಸಂಘದ ಕಾರ್ಯಚಟುವಟಿಕೆಗಳಲ್ಲಿ ಒಂದಾದ 'ಸಿದ್ಧಗಂಗಾ' ಮಾಸಪತ್ರಿಕೆಯ ಬಗ್ಗೆ ಮೆಚ್ಚುಗೆಯನ್ನು ಸೂಚಿಸಿದರು.

## ಸನ್ಮಾನ

ನಾಡಿನ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ವಾಣಿಜ್ಯೋದ್ಯಮಿಗಳಾದ ಶ್ರೀ ಬಿ.ಎಸ್.ಎಲ್.ಎನ್. ಮೂರ್ತಿ, ಸಮಾಜ ಸೇವಕರಾದ ಶ್ರೀ ಬಿ.ಎಸ್. ಕೆಂಪರಾಜು, ಮಣಿಪಾಲ ಆಸ್ಪತ್ರೆಯ ವ್ಯವಸ್ಥಾಪಕ ನಿರ್ದೇಶಕರಾದ ಡಾ. ನಾಗೇಂದ್ರಸ್ವಾಮಿ, ವೋಕ್ಕಾರ್ಡ್ ಆಸ್ಪತ್ರೆಯ ಡಾ. ಜವಳಿ ಅವರನ್ನು ಪೂಜ್ಯಶ್ರೀಗಳು ಶಾಲುಹೊದಿಸಿ ಘಮಘಮಿಸುವ ಏಲಕ್ಕಿ ಹಾರ ಹಾಕಿ, ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿ ಆಶೀರ್ವದಿಸಿದರು.

ಇದೇ ಸಂದರ್ಭದಲ್ಲಿ 'ಜ್ಞಾನದಾಸೋಹ ಮಣಿಮಾಲೆ'ಯ ೧೦೮ ಕೃತಿಗಳ ಸಂಪಾದಕರಾದ ಪ್ರೊ. ಟಿ.ಆರ್. ಮಹಾದೇವಯ್ಯ, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರನ್ನು ಪೂಜ್ಯ ಶ್ರೀಗಳವರು ಶಾಲು ಹೊದಿಸಿ, ಫಲತಾಂಬೂಲ, ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಮತ್ತೊಬ್ಬ ಸಂಪಾದಕರಾದ ಡಾ. ಎಂ.ಜಿ. ನಾಗರಾಜ್ ಅವರು ಅನಿವಾರ್ಯ ಕಾರಣಗಳಿಂದ ಸಮಾರಂಭದಲ್ಲಿ ಭಾಗವಹಿಸಿರಲಿಲ್ಲ.

'ನೆನೆವಮನ' ಸಂಪಾದಕರಲ್ಲೊಬ್ಬರಾದ ಡಾ. ಸಿ. ಶಿವಕುಮಾರ ಸ್ವಾಮಿ, ಸಿದ್ಧಶ್ರೀಲ ಗ್ರಂಥದ ಸಂಚಾಲಕರಾದ ಪ್ರೊ. ಆರ್. ರಾಚಪ್ಪ, ಮುದ್ರಕರಾದ ಗೀತಾಂಜಲಿ ಗ್ರಾಫಿಕ್ಸ್‌ನ ಮಾಲೀಕರಾದ ಶ್ರೀ ಜಿ. ನಾಗಸುಂದರ್, ಪ್ರಿಂಟ್ ಪಾರ್ಕ್‌ನ ಮಾಲೀಕರಾದ ಶ್ರೀ ಜೆ.ಬಿ. ಪಾಟೀಲ್ ಹಾಗೂ ಸತ್ಯಶ್ರೀ ಮುದ್ರಣಾಲಯದ ಶ್ರೀ ಎಲ್. ಲಿಂಗಪ್ಪ ಅವರನ್ನು ಪೂಜ್ಯ ಶ್ರೀಗಳವರು ಶಾಲು ಹೊದಿಸಿ ಫಲತಾಂಬೂಲ, ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು.

ಅಧ್ಯಕ್ಷತೆ ವಹಿಸಿದ್ದ ನಾಡೋಜ ಡಾ. ದೇ. ಜವರೇಗೌಡರವರು ತಮ್ಮ ಅಧ್ಯಕ್ಷ ಭಾಷಣದಲ್ಲಿ 'ಪರಮಪೂಜ್ಯ ಶ್ರೀಗಳವರು ಶೈಕ್ಷಣಿಕ ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ತುಂಬು ಹೃದಯದಿಂದ ಪ್ರಶಂಸಿಸಿ, ಮಹಾಶರಣರಾದ ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ ಅವರೆಲ್ಲರನ್ನು ಪೂಜ್ಯ ಶ್ರೀಗಳವರಲ್ಲಿ ಕಾಣುವ ಭಾಗ್ಯವನ್ನು ಭಗವಂತ ನಮಗೆ ಕರುಣಿಸಿದ್ದಾನೆ. ಗ್ರಾಮೀಣ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವಿಷ್ಯವನ್ನು ರೂಪಿಸಿರುವ ಪೂಜ್ಯ ಶ್ರೀಗಳು ಇಂದು ಒಂಬತ್ತು



೧೦೮ ಕೃತಿಗಳ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರಿಗೆ ಪೂಜ್ಯ ಶ್ರೀಗಳವರಿಂದ ಆಶೀರ್ವಾದ




ಶ್ರೀ ಪಿ.ಜಿ.ಆರ್. ಸಿಂಧ್ಯಾ ರವರಿಂದ "ನಡೆದು ಬಂದ ದಾರಿ" ಕೃತಿ ಬಿಡುಗಡೆ




ಶ್ರೀ ಪಿ.ಜಿ.ಆರ್. ಸಿಂಧ್ಯಾ ರವರಿಗೆ ಶ್ರೀ ಕೆ.ಹೆಚ್. ಶಿವರುದ್ರಯ್ಯ ರವರಿಂದ ಗೌರವ ಸಮರ್ಪಣೆ










ಡಾ. ಎಸ್.ಎಂ. ವೃಷಭೇಂದ್ರಸ್ವಾಮಿಯವರಿಂದ ವಿಷಯ ಮಂಡನೆ




ವಿಧಾನ ಪರಿಷತ್‌ನ ವಿರೋಧ ಪಕ್ಷದ ನಾಯಕರಾದ ಶ್ರೀ ವಿ.ಎಸ್. ಉಗ್ರಪ್ಪನವರಿಂದ ವಿಷಯ ಮಂಡನೆ




ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಮುಖ್ಯಮಂತ್ರಿ ಚಂದ್ರು ರವರಿಂದ ವಿಷಯ ಮಂಡನೆ

ಸಾವಿರ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಸಲಹುತ್ತಿದ್ದಾರೆ" ಜಗತ್ತಿನಲ್ಲಿಯೇ ಇಂತಹ ಉದಾಹರಣೆಗಳು ಇಲ್ಲ ಎಂದರು.

'ಶತಮಾನೋತ್ಸವ ಸವಿನೆನಪಿಗಾಗಿ ವಿವಿಧ ವಿಷಯಗಳನ್ನು ಕುರಿತ ೧೦೮ ಕೃತಿಗಳನ್ನು ಹೊರತಂದಿರುವುದು ನಿಜಕ್ಕೂ ಸಾಹಸದ ವಿಷಯ. ಶ್ರೀಗಳವರ ಆಶೀರ್ವಾದಿಂದ ಇವೆಲ್ಲ ಸುಲಲಿತವಾಗಿ ನಡೆದಿವೆ ಎಂದು ಭಾವಿಸಿದ್ದೇನೆ' ಎಂದರು.

ಸಾನ್ನಿಧ್ಯ ವಹಿಸಿದ್ದ ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳು ತಮ್ಮ ನುಡಿ ನಮನದಲ್ಲಿ 'ಪರಮಪೂಜ್ಯ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳು ನಮಗೆಲ್ಲಾ ಆದರ್ಶರಾಗಿದ್ದಾರೆ. ಪೂಜ್ಯರು ಮಹಾ ತಪಸ್ವಿಗಳು ಅವರ ತಪಸ್ಸಿನ ಫಲದಿಂದ ಇಷ್ಟೆಲ್ಲಾ ಅದ್ಭುತವಾದ ಕಾರ್ಯಗಳು ಜರುಗುತ್ತಿವೆ. ಪೂಜ್ಯರು ತಮ್ಮ ಕತೃತ್ವ ಶಕ್ತಿಯಿಂದ ಶ್ರೀಮಠವನ್ನು ಮಹಾಮನೆಯನಾಗಿಸಿದ್ದಾರೆ. ಅವರು ಸರ್ವಧರ್ಮ ಸಹಿಷ್ಣುಗಳು, ಮಹಾಮಾನವತಾವಾದಿಗಳು. ಬಸವಾದಿ ಶರಣರ ಸಿದ್ಧಾಂತಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಗೊಳಿಸುತ್ತಿದ್ದಾರೆ. ಅವರು ರಾಷ್ಟ್ರಕಂಡ ಮಹಾಸಂತರು' ಎಂದು ಬಣ್ಣಿಸಿದರು.

ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳ ಸಂಘದ ಪ್ರಧಾನ ಕಾರ್ಯದರ್ಶಿ ಡಾ. ಎಂ.ಎನ್. ಚನ್ನಬಸಪ್ಪ ಅವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಹಳೆಯ ವಿದ್ಯಾರ್ಥಿ ಸಂಘ ಬೆಳೆದು ಬಂದ ದಾರಿ, ಕಳೆದ ಐವತ್ತು ವರ್ಷಗಳಲ್ಲಿ ಮಾಡಿದ ಸಾಧನೆಗಳನ್ನು ತಿಳಿಸಿದರು. ಪ್ರೊ. ಎಚ್.ವಿ. ವೀರಭದ್ರಯ್ಯ ಅವರು ಕಾರ್ಯಕ್ರಮ ನಡೆಸಿಕೊಟ್ಟರು. ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಶರಣು ಸಮರ್ಪಣೆ ಮಾಡಿದರು.

## ಕೃಷಿ ಸಮಾವೇಶ

ಫೆಬ್ರವರಿ ೩೨ ಬೆಳಿಗ್ಗೆ ಶ್ರೀ ಆದಿಚುಂಚನಗಿರಿ ಸಂಸ್ಥಾನ ಮಠದ ಪೂಜ್ಯ ಜಗದ್ಗುರು ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು, ಭಾಲ್ಕಿ ಹಿರೇಮಠದ ಪೂಜ್ಯ ಶ್ರೀ ಬಸವಲಿಂಗಪಟ್ಟದ್ದೇವರು, ಇವರ ದಿವ್ಯ ಸಾನ್ನಿಧ್ಯದಲ್ಲಿ ಸಮಾವೇಶ ನಡೆಯಿತು.

ಸಮಾವೇಶವನ್ನು ಉದ್ಘಾಟಿಸಿದ ರಾಜ್ಯಸಭಾ ಸದಸ್ಯರು ಹಾಗೂ ಮಾಜಿ ಕೇಂದ್ರ ಸಚಿವರು ಆದ ಶ್ರೀ ಶಿವರಾಜ ಪಾಟೀಲ್ ಅವರು "ತಳಿ ವಿಜ್ಞಾನ ಸಂಶೋಧನೆಗಳ ಫಲಿತಾಂಶಗಳು ಎಲ್ಲ





ರೈತರಿಗೂ ತಲುಪಬೇಕು ಈ ವಿಜ್ಞಾನವನ್ನು ವಿರೋಧಿಸುವುದು ಸರಿಯಲ್ಲ. ರೋಗನಿರೋಧಕ ಶಕ್ತಿ ಹೊಂದಿರುವ, ಕಡಿಮೆ ನೀರಿನಿಂದ ಬೆಳೆಯುವ ಬೆಳೆಗಳು ಸಂಶೋಧನೆಯಾದರೆ ದೇಶದ ಅಭಿವೃದ್ಧಿಗೆ ಪೂರಕವಾಗುತ್ತದೆ. ಇಂದಿನ ಪರಿಸ್ಥಿತಿಯಲ್ಲಿ ಕೃಷಿ ಕ್ಷೇತ್ರಕ್ಕೆ ಆದ್ಯತೆ ನೀಡಿದರೆ ಆಹಾರೋತ್ಪಾದನೆಯ ಕೊರತೆ ನೀಗುತ್ತಿದೆ. ಕೃಷಿ ಇಲ್ಲದೆ ಮನುಕುಲ ಇಲ್ಲ. ಎಲ್ಲರಿಗೂ ಕೃಷಿಯೇ ಆಧಾರ. ದೇಶದ ಬೆನ್ನೆಲುಬು ಕೃಷಿ. ಇದರ ಬಗ್ಗೆ ನಿರ್ಲಕ್ಷತನ" ಸಲ್ಲದು.

'ಮುಂದಾಲೋಚನೆ ದೂರದೃಷ್ಟಿಯ ಕೊರತೆಯಿಂದ ರಾಸಾಯನಿಕ ಬಳಕೆಯಿಂದ ಭೂಮಿ ಫಲವತ್ತತೆಯನ್ನು ಕಳೆದುಕೊಂಡು ಆಹಾರ ಉತ್ಪಾದನೆಯ ಮೇಲೆ ದುಷ್ಪರಿಣಾಮ ಬೀರಿದೆ. ಕೃಷಿ ಕ್ಷೇತ್ರದ ಸುಧಾರಣೆಗಾಗಿ ನೀರಾವರಿ ಸೌಲಭ್ಯ ಹೆಚ್ಚಿಸುವ ತುರ್ತು ಕ್ರಮ ಕೈಗೊಳ್ಳಬೇಕಾಗಿದೆ. ಆದರೆ ನೀರಾವರಿ ಯೋಜನೆಗಳ ಅನುಷ್ಠಾನ ದೀರ್ಘವಾದಿಯಾಗಿದ್ದು ಇದರಿಂದ ಕೃಷಿಕ್ಷೇತ್ರ ಸಮಸ್ಯೆಗೆ ಸಿಲುಕಿದೆ ಎಂದು ವಿಷಾದ ವ್ಯಕ್ತಪಡಿಸಿದ ಶ್ರೀ ಶಿವರಾಜ ಪಾಟೀಲರು. 'ಕೃಷಿ ಕ್ಷೇತ್ರದ ಸಮಸ್ಯೆಗಳ ಬಗ್ಗೆ ಬೆಳಕು ಚೆಲ್ಲಲು ಮತ್ತು ರೈತರಿಗೆ ಕೃಷಿತಜ್ಞರಿಂದ ಮಾರ್ಗದರ್ಶನ ಕೊಡಿಸಲು ಪೂಜ್ಯ ಶ್ರೀಗಳು ಸಮಾವೇಶ ಏರ್ಪಡಿಸಿವುದು ಅರ್ಥಪೂರ್ಣವಾಗಿದೆ' ಎಂದು ಶ್ಲಾಘಿಸಿದರು.

"ಕರ್ನಾಟಕ ದಾಸೋಹ ಮತ್ತು ಶಿಕ್ಷಣಕ್ಕೆ ಹೆಸರುವಾಸಿಯಾಗಿದೆ. ಇಲ್ಲಿನ ಮಠಮಾನ್ಯಗಳು ನಡೆಸುತ್ತಿರುವ ದಾಸೋಹ ಬೇರೆ ರಾಜ್ಯಗಳಲ್ಲಿ ಇಲ್ಲ. ಶರಣರ ಕಾಯಕ ತತ್ತ್ವದಡಿ ದಸೋಹ ಪರಂಪರೆ ಬೆಳೆದುಬಂದಿದೆ. ಸಿದ್ಧಗಂಗಾ ಮಠ ಸಾವಿರಾರು ಬಡ ವಿದ್ಯಾರ್ಥಿಗಳಿಗೆ ಅನ್ನ ನೀಡುವ ಮೂಲಕ ತ್ರಿವಿಧ ದಾಸೋಹ ಕೇಂದ್ರವೆಂದು ಖ್ಯಾತಿ ಗಳಿಸಿದೆ" ಎಂದರು. ನೂರೊಂದು ವರ್ಷ ಮುಗಿಸಿ ನೂರೆರಡನೇ ವರ್ಷಕ್ಕೆ ಪಾದಾರ್ಪಣೆ ಮಾಡಲಿರುವ ಪೂಜ್ಯ ಶ್ರೀಗಳವರು ಶರಣರ ಸಿದ್ಧಾಂತಗಳನ್ನು ಶ್ರೀಕ್ಷೇತ್ರದಲ್ಲಿ ಸಾಕಾರಗೊಳಿಸಿದ್ದಾರೆ. ಈ ಮಹಾನ್ ಚೇತನ ಬಹುಕಾಲ ಬಾಳಿ ಸಮಾಜಕ್ಕೆ ಮಾರ್ಗದರ್ಶನ ನೀಡಲಿ' ಎಂದು ಹಾರೈಸಿದರು.

'ಥಾಟ್ಸ್ ಆಫ್ ಎನ್‌ಲೈಟ್‌ಮೆಂಟ್' ಕೃತಿಯನ್ನು ಬಿಡುಗಡೆ ಮಾಡಿದ ಕೇಂದ್ರ ಕಾರ್ಮಿಕ ಹಾಗೂ ಉದ್ಯೋಗ ಇಲಾಖೆ ರಾಜ್ಯ ಸಚಿವರಾದ ಶ್ರೀ ಆಸ್ಕರ್ ಫರ್ನಾಂಡೀಸ್ ಅವರು "ಇಡೀ ವಿಶ್ವಕ್ಕೆ ಆಹಾರ ಒದಗಿಸುವ ಚೈತನ್ಯವಿರುವುದು ಭಾರತಕ್ಕೆ ಮಾತ್ರ. ನೀರಿಲ್ಲದ ಸ್ಥಳದಲ್ಲಿಯೂ ಬೆಳೆ ಬೆಳೆಯುವ ವೈಜ್ಞಾನಿಕ ಪದ್ಧತಿ ಅಳವಡಿಸಿಕೊಂಡು ಆಹಾರ ಕೊರತ ನೀಗಿಸಬೇಕಾಗಿದೆ. ಭಾರತದ ಬೆನ್ನೆಲುಬು ಕೃಷಿಯ ಬಗ್ಗೆ ಸ್ವಾಮೀಜಿಯವರು ಕಳಕಳಿ



ಪೂಜ್ಯ ಶ್ರೀ ಶ್ರೀಗಳವರಿಂದ ವಿಷಯ ಮಂಡನೆ ಮಾಡಿದ ಶ್ರೀ ಹೆಚ್. ಗಂಗಾಧರನ್ ಅವರಿಗೆ ಆಶೀರ್ವಾದ



೧೦೮ ಕೃತಿಗಳನ್ನು ಕುರಿತು ಶ್ರೀ ಚನ್ನಿಗಪ್ಪ ರವರಿಂದ ಶ್ಲಾಘನೆ




ಪೂಜ್ಯ ಶ್ರೀ ಶ್ರೀಗಳವರಿಂದ ವಾಣಿಜ್ಯೋದ್ಯಮಿ ಶ್ರೀ ಬಿ.ಎಸ್. ಎಲ್.ಎನ್. ಮೂರ್ತಿ ರವರಿಗೆ ಆಶೀರ್ವಾದ



ವರದಿ







ಸಮಾಜ ಸೇವಕರಾದ ಶ್ರೀ ಬಿ.ಎಸ್. ಕೆಂಪರಾಜು ರವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ



ಮಣಿಪಾಲ್ ಆಸ್ಪತ್ರೆಯ ಎಂ.ಡಿ. ಡಾ|| ನಾಗೇಂದ್ರಸ್ವಾಮಿ ಅವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ




ವೋಕ್‌ಹಾರ್ಟ್ ಆಸ್ಪತ್ರೆಯ ಡಾ|| ಜವಳಿ ಅವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ

ಇಟ್ಟುಕೊಂಡಿರುವುದಕ್ಕೆ ಈ ಸಮಾವೇಶ ಒಂದು ಜ್ವಲಂತ ನಿದರ್ಶನ" ಎಂದರು.

ಶ್ರೀ ಆಸ್ಕರ್ ಅವರು ತಮ್ಮ ಹವ್ಯಾಸವಾದ ಮೌತ್ ಆರ್ಗನ್‌ನಲ್ಲಿ 'ಹ್ಯಾಪಿ ಬರ್ತ್‌ಡೇಟುಯೂ' ಎಂಬ ಸ್ವರವನ್ನು ಹೊಮ್ಮಿಸಿ ಶ್ರೀಗಳವರ ಹುಟ್ಟುಹಬ್ಬಕ್ಕೆ ಶುಭ ಕೋರಿದರು.

'ಸ್ವಸಹಾಯ ಗುಂಪುಗಳ ಸುಸ್ಥಿರತೆ ಸವಾಲು' ಕೃತಿಯನ್ನು ಲೋಕಾರ್ಪಣೆ ಮಾಡಿ ಮಾತನಾಡಿದ ಕೇಂದ್ರ ಭೂ ಸಾರಿಗೆ ರಾಜ್ಯ ಸಚಿವ ಶ್ರೀ ಕೆ.ಹೆಚ್. ಮುನಿಯಪ್ಪ ಅವರು 'ಹಿಂದಿಗಿಂತಲೂ ಇಂದು ಕೃಷಿ ಕ್ಷೇತ್ರಕ್ಕೆ ಆದ್ಯತೆ ನೀಡಬೇಕಾಗಿದೆ. ಪಶ್ಚಿಮ ಘಟ್ಟದಲ್ಲಿ ಸುಮಾರು ೨ ಸಾವಿರ ಟಿ.ಎಂ.ಸಿ. ನೀರು ವ್ಯರ್ಥವಾಗಿ ಸಮುದ್ರ ಸೇರುತ್ತಿದೆ. ಈ ನೀರನ್ನು ಸಮರ್ಪಕವಾಗಿ ಬಳಸಿಕೊಳ್ಳಲು ನಿವೃತ್ತ ಮುಖ್ಯ ಇಂಜಿನಿಯರ್‌ರಾದ ಶ್ರೀ ಪರಮಶಿವಯ್ಯ ಅವರು ವರದಿಯನ್ನು ಅರ್ಥಪೂರ್ಣವಾಗಿ ಅನುಷ್ಠಾನಗೊಳಿಸಬೇಕು. ಈ ಬಗ್ಗೆ ಸರ್ಕಾರ ಗಂಭೀರವಾಗಿ ಚಿಂತಿಸಬೇಕು. ಇಂದು ನೀರಾವರಿ ಯೋಜನೆಗಳ ಅನುಷ್ಠಾನಕ್ಕೆ ದೊಡ್ಡ ಹೋರಾಟವೇ ನಡೆಯಬೇಕು' ಎಂದು ಹೇಳಿದರು.

ಕೃಷಿ ಸಮಾವೇಶದ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನಾಡಿದ ಕೃಷಿ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿಗಳಾದ ಡಾ. ದ್ವಾರಕೀನಾಥ ಅವರು "ಕೃಷಿ ಜೀವನ ಹಿಂದೆ ಸ್ವಾವಲಂಬಿಯಾಗಿತ್ತು. ಆದರೆ ಇಂದು ರೈತರಿಗೆ ಸ್ವತಂತ್ರ ಜೀವನ ಉಳಿದಿಲ್ಲ. ಕೃಷಿ ತೊಂದರೆಗೆ ಸಿಲುಕಿದೆ. ಇದಕ್ಕೆ ಆಡಳಿತ ನಡೆಸುವವರು ಮತ್ತು ನೀತಿ ಚಿಂತಕರಲ್ಲಿ ಕೃಷಿ ಅಭಿವೃದ್ಧಿಗೆ ಪೂರಕವಾದ ದೂರದೃಷ್ಟಿ, ಚಿಂತನೆಗಳು ಇಲ್ಲದಿರುವುದ ಪ್ರಮುಖ ಕಾರಣ. ಕೃಷಿಯನ್ನು ಅಭಿವೃದ್ಧಿಪಡಿಸಲು ಅದಕ್ಕೆ ಪೂರಕವಾದ ಉಪಕಸುಬುಗಳನ್ನು ಉತ್ತೇಜಿಸಬೇಕಿದೆ' ಎಂದು ಅಭಿಪ್ರಾಯಪಟ್ಟರು.

## ವಿಷಯ ಮಂಡನೆ

ಕಪ್ಪತ ಗುಡ್ಡದ 'ಕೃಷಿ ಪಂಡಿತ' ಪ್ರಶಸ್ತಿ ಪುರಸ್ಕೃತ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳು 'ಹಸಿರು ನಮ್ಮ ಉಸಿರು' ವಿಷಯವನ್ನು ಮಂಡಿಸಿ 'ಗೋಹತ್ಯೆ ನಿಷೇದಿಸಬೇಕು. ಹರಿಯುವ ನೀರನ್ನು ಭೂಮಿಯಲ್ಲಿ ಇಂಗುವಂತೆ ಮಾಡಬೇಕು' ಎಂದು ಸಲಹೆ ಮಾಡಿದರು. 'ಒಣ ಬೇಸಾಯ' ವಿಷಯುವನ್ನು ಕುರಿತು ಮಾತನಾಡಿದ ಶ್ರೀ ಮಲ್ಲಣ್ಣ ನಾಗರಾಳ ಅವರು 'ತಜ್ಞರ ಅಭಿಪ್ರಾಯ ಪಡೆದು ಒಣ ಬೇಸಾಯ ಪದ್ಧತಿಯಲ್ಲಿ ಬದಲಾವಣೆ ತರಬೇಕು' ಎಂದು ಅಭಿಪ್ರಾಯಪಟ್ಟರು. ಶ್ರೀ ಎಸ್.ಎಸ್. ಅಮಟಪ್ಪನವರ



ಅವರು 'ನೀರಾವರಿ ಬೆಳೆ' ಕುರಿತು ವಿಷಯ ಮಂಡಿಸಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಕೇಂದ್ರ ಮಾಜಿ ಸಚಿವ ಶ್ರೀ ಸಿ.ಎಂ. ಇಬ್ರಾಹಿಂ ಅವರು ಮಾತನಾಡಿ 'ಪರಮಪೂಜ್ಯರು ಸಮಾವೇಶದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಮಹಾಪುರುಷರು. ಬಸವಣ್ಣನವರ ಆದರ್ಶಗಳ ಮುಂಬೆಳಕಿನಲ್ಲಿ ಜೀವನ ನಡೆಸುತ್ತಿರುವವರು. ದಾಸೋಹ ಮತ್ತು ಕಾಯಕ ಅನುಷ್ಠಾನಕ್ಕೆ ಬಂದರೆ ಕೃಷಿ ಕ್ಷೇತ್ರವೂ ಉದ್ಧಾರವಾಗುತ್ತದೆ. ದೇಶದ ಅಭಿವೃದ್ಧಿಗೆ ಬಸವತತ್ತ್ವ ಜಾರಿಗೆ ಬರಬೇಕು, ಧರ್ಮ ರಾಜಕಾರಣ ಸಮಾಜದ ಅಭಿವೃದ್ಧಿಗೆ ಮಾರಕ' ಎಂದು ನುಡಿದರು.

'ಪೂಜ್ಯ ಶ್ರೀಗಳವರ ಪಟ್ಟಾಧಿಕಾರದ ಅಮೃತ ಮಹೋತ್ಸವಕ್ಕೆ ಬಂದಿದ್ದೆ. ಜಗತ್ತಿನ ಯಾವುದೇ ಧರ್ಮಗುರುಗಳು ಒಂದು ಪೀಠದಲ್ಲಿ ೮೦ ವರ್ಷಗಳ ಕಾಲ ಕುಳಿತಿಲ್ಲ. ಶ್ರೀಗಳವರ ವಿದ್ಯಾರ್ಥಿಗಳು ಕಾಲವಾದರೂ ಬುದ್ಧಿಗಳು ಮಾತ್ರ ಚಿರಾಯುವಾಗಿದ್ದಾರೆ. ಯಮಧರ್ಮರಾಯ ಬೇಕಿದ್ದರೂ ಬುದ್ಧಿಯವರ ಅಪ್ಪಣೆ ಪಡೆದೇ ಬರಬೇಕು. ಈ ಮೂಲಕ ಸ್ವಾಮೀಜಿಯವರು ಜಗತ್ತಿನ ೮ನೇ ಅದ್ಭುತವೇ ಸರಿ' ಎಂದರು.

ಸಮಾವೇಶದ ಅಧ್ಯಕ್ಷತೆ ವಹಿಸಿದ್ದ ಕೃಷಿ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿಗಳಾದ ಪದ್ಮಶ್ರೀ ಎಂ. ಮಹದೇವಪ್ಪನವರು ಮಾತನಾಡಿ 'ರೈತರು ರಾಸಾಯನಿಕ ಬಳಕೆಯನ್ನು ಕಡಿಮೆ ಮಾಡಿ ಸಾವಯವ ಕೃಷಿಗೆ ಹೆಚ್ಚು ಗಮನ ಕೊಡಬೇಕು. ಕೃಷಿ ತಜ್ಞರ ಸಲಹೆ ಪಡೆದು ಹೊಸ ಹೊಸ ತಳಿಗಳನ್ನು ಬಳಸಿಕೊಂಡು ಉತ್ಪಾದನೆಯನ್ನು ಹೆಚ್ಚಿಸಬೇಕು' ಎಂದರಲ್ಲದೆ 'ಇಂತಹ ಸಮಾವೇಶಗಳು ರೈತರಿಗೆ ಅರಿವನ್ನುಂಟುಮಾಡಿ ಕೃಷಿ ಉತ್ಪಾದನೆಗೆ ಸಹಕಾರಿಯಾಗುತ್ತವೆ. ಈ ನಿಟ್ಟಿನಲ್ಲಿ ಪೂಜ್ಯಶ್ರೀಗಳವರು ಕೃಷಿಕ್ಷೇತ್ರದ ಬಗ್ಗೆ ಹೊಂದಿರುವ ಕಾಳಜಿ, ಕಳಕಳಿ ಅನುಕರಣೀಯ' ಎಂದು ಪ್ರಶಂಸಿಸಿದರು.

ಸಾನ್ನಿಧ್ಯ ವಹಿಸಿದ್ದ ಪೂಜ್ಯ ಜಗದ್ಗುರು ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು 'ಕೃಷಿ ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ನಿರೀಕ್ಷಿಸಬೇಕಾದರೆ ಮೊದಲು ರೈತರಿಗೆ ಅಗತ್ಯವಾದ ಮೂಲ ಸೌಕರ್ಯಗಳನ್ನು ಸರ್ಕಾರ ಉಚಿತವಾಗಿ ಕಲ್ಪಿಸಿಕೊಡಬೇಕು. ರೈತರು ನೀರು, ವಿದ್ಯುತ್ ಇಲ್ಲದೆ ಹೋದರೆ ಹೇಗೆ ತಾನೆ ಬೆಳೆಗಳನ್ನು ಬೆಳೆಯಲು ಸಾಧ್ಯ? ಎಂದು ಪ್ರಶ್ನಿಸಿದ ಜಗದ್ಗುರುಗಳು ಇಂದು ರೈತನ ಪಾಡು ಕೆಳಮಟ್ಟಕ್ಕಿಳಿದಿದೆ. ಅವನಿಂದು ಪವಾಡ ಸದೃಶರಾಗಿ ಬದುಕುತ್ತಿದ್ದಾನೆ. ಕೃಷಿಗೆ ನೀರಿಲ್ಲದೆ ಭೂಮಿಯನ್ನು ಸೀಳಿ ನೂರಾರು



ಹಿರಿಯ ಸಂಶೋಧಕ ಡಾ. ಸಂಗಮೇಶ ಸವದತ್ತಿ ಮಠ ಅವರಿಗೆ ಪೂಜ್ಯ ಶ್ರೀಗಳವರಿಂದ ಆಶೀರ್ವಾದ



ಡಾ. ಎಂ.ಎಸ್. ಚನ್ನಬಸಪ್ಪ ಅವರಿಗೆ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಾದ



ಶ್ರೀಮಠದ ಆಡಳಿತಾಧಿಕಾರಿ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರಿಗೆ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಾದ











ಸಿದ್ಧಗಂಗಾ ಮಾಸಪತ್ರಿಕೆಯ ಪ್ರಕಾಶಕರಾದ ಶ್ರೀ ಹೆಚ್.ಬಿ. ಗಂಗಾಧರಯ್ಯನವರಿಗೆ ಆಶೀರ್ವಾದ



'ಚಿತ್ರ ಜಂಗಮ' ಗ್ರಂಥದ ಸಂಚಾಲಕರೂ, ಪ್ರಸಿದ್ಧ ಛಾಯಾಗ್ರಾಹಕರೂ ಆದ ಶ್ರೀ ಬಿ.ಸಿ. ಸುರೇಶ್ ಅವರಿಗೆ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಾದ



ನಾಡೋಜ ಡಾ. ಜವರೇಗೌಡ ಅವರಿಂದ ಅಧ್ಯಕ್ಷ ಭಾಷಣ

ಅಡಿಗಳಿಂದ ನೀರೆತ್ತಿ ಕೃಷಿ ಮಾಡುವಂತಾಗಿದೆ. ಮಧ್ಯ ಕರ್ನಾಟಕ ಜಿಲ್ಲೆಗಳಲ್ಲಿ ಫ್ಲೋರೈಡ್‌ಯುಕ್ತ ನೀರನ್ನು ಕುಡಿತು ಹತ್ತಾರು ಕಾಯಿಲೆಗಳಿಗೆ ಆಹ್ವಾನ ನೀಡಿದಂತಾಗಿದೆ. ಈ ಸಮಸ್ಯೆಯನ್ನು ಸರ್ಕಾರ ಗಂಭೀರವಾಗಿ ಯೋಚಿಸಿ ಪರಿಹಾರಮಾಡಬೇಕು. ಇವತ್ತು ಐಟಿ ಬಿಟಿ ಉದ್ದಿಮೆಗಳಿಗೆ ಕೊಡುತ್ತಿರುವ ಸೌಲಭ್ಯಗಳಲ್ಲಿ ಶೇ. ೧೦ರಷ್ಟನ್ನು ರೈತರಿಗೆ ಕೊಟ್ಟರೆ ಅವರನ್ನು ಈಗಿರುವ ಸಂಕಷ್ಟದಿಂದ ಪಾರುಮಾಡಬಹುದು. ಐಟಿ ಬಿಟಿಗಳಿಂದ ಜನರ ಹಸಿವನ್ನು ಹಿಂಗಿಸಲು ಸಾಧ್ಯವಿಲ್ಲ' ಎಂದು ಅಭಿಪ್ರಾಯ ವ್ಯಕ್ತಪಡಿಸಿದ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು 'ದೇಶದ ಕೃಷಿ ನೀತಿ ಬದಲಾಗಿ ರೈತರ ಪರಧೋರಣೆ ತಾಳಬೇಕಾಗಿದೆ' ಎಂದು ಸಲಹೆ ಮಾಡಿದರು.

'ಕಾವೇರಿ ನದಿಗೆ ಮಹಾನದಿಯನ್ನು ಜೋಡಿಸುವುದರಿಂದ ದಕ್ಷಿಣ ಭಾರತದ ಆರು ರಾಜ್ಯಗಳಲ್ಲಿ ನೀರಿನ ಬರ ನೀಗಿಸಲು ಸಾಧ್ಯವಿದೆ. ನದಿ ಜೋಡಿಸಿದರೆ ಮಹಾನದಿಯಿಂದ ಉಂಟಾಗುವ ಪ್ರವಾಹವನ್ನು ತಪ್ಪಿಸಬಹುದು' ಎಂದರು. 'ಕೃಷಿಯ ಮೂಲ ಬಂಡವಾಳದ ಜಾನುವಾರುಗಳು ಕಸಾಯಿ ಖಾನೆಗೆ ಹೋಗುವುದನ್ನು ತಪ್ಪಿಸಲು ಗಮನಕೊಡಬೇಕು' ಎಂದು ಅಭಿಪ್ರಾಯಪಟ್ಟರು. ಇದೇ ಸಂದರ್ಭದಲ್ಲಿ ಶ್ರೀ ಆದಿಚುಂಚನಗಿರಿ ಮಠದ ಪರವಾಗಿ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ಪರಮಪೂಜ್ಯ ಶ್ರೀಗಳವರಿಗೆ ಗುರುವಂದನೆ ಸಲ್ಲಿಸಿದರು.

ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು ಅವರು 'ರೈತರ ಸಮಸ್ಯೆಗಳನ್ನು ಪರಿಹರಿಸಿದ ಹೊರತು ಕೃಷಿ ಕ್ಷೇತ್ರದಲ್ಲಿ ಅಭಿವೃದ್ಧಿ ಕಾಣಲು ಸಾಧ್ಯವಿಲ್ಲ. ಅಗತ್ಯವಿರುವ ಕಡೆ ನೀರಾವರಿ ಯೋಜನೆಗಳನ್ನು ಹಮ್ಮಿಕೊಂಡು ಕಾಲಮಿತಿಯಲ್ಲಿ ಅನುಷ್ಠಾನಗೊಳಿಸಬೇಕು. ರಾಸಾಯನಿಕ ಗೊಬ್ಬರವನ್ನು ಬಳಸುವುದು ಕಡಿಮೆಮಾಡಿ ಸಾವಯವ ಗೊಬ್ಬರವನ್ನು ಉಪಯೋಗಿಸಿ ಪೌಷ್ಠಿಕ ಬೆಳೆಗಳನ್ನು ಬೆಳೆಯಬೇಕು' ಎಂದರು.

'ಪೂಜ್ಯ ಶ್ರೀಗಳವರು ಮಠಾಧಿಪತಿಗಳಿಗೆಲ್ಲ ಮಾರ್ಗದರ್ಶಕರು. ಅವರ ಅನುಗ್ರಹ, ಮಾರ್ಗದರ್ಶನ ಸದಾ ನಮ್ಮ ಮೇಲಿರಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತೇವೆ. ಇಂಥ ಸಮಾವೇಶಗಳು ಮೇಲಿಂದ ಮೇಲೆ ನಡೆದು ರೈತರಿಗೆ ಸೂಕ್ತ ಮಾರ್ಗದರ್ಶನ ದೊರೆಯುವಂತಾಗಬೇಕು' ಎಂದು ಅಭಿಪ್ರಾಯಪಟ್ಟರು.

ವೇದಿಕೆಯಲ್ಲಿ ಸಣ್ಣ ಕೈಗಾರಿಕೆ ಮತ್ತು ರೇಷ್ಮೆ ಸಚಿವ ಶ್ರೀ ವೆಂಕಟರಮಣಪ್ಪ, ಮಾಜಿ ಸಚಿವ ಶ್ರೀ ಕೆ.ಎಸ್. ಬೆಳ್ಳುಬ್ಬಿ, ಮಾಜಿ

ಸಂಸದ ಶ್ರೀ ಜಿ.ಎಸ್. ಬಸವರಾಜು, ಶಾಸಕ ಹಾಗೂ ಮಾಜಿ ಸಚಿವ ಡಾ. ಜಿ. ಪರಮೇಶ್ವರ್, ಶತಮಾನೋತ್ಸವ ಸಮಿತಿ ಅಧ್ಯಕ್ಷ ನ್ಯಾಯಮೂರ್ತಿ ವಿ.ಎಸ್. ಮಳಿಮಠ, ಸಂಚಾಲಕ ಹಾಗೂ ಶಾಸಕ ಶ್ರೀ ವಿ. ಸೋಮಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

## ಮಹಿಳಾ ಸಮಾವೇಶ

ಕೊಟ್ಟೂರು ಸಂಸ್ಥಾನ ಮಠದ ಪೂಜ್ಯ ಶ್ರೀ ಸಂಗನ ಬಸವ ಮಹಾಸ್ವಾಮಿಗಳು, ನಾಗನೂರು ಶ್ರೀ ರುದ್ರಾಕ್ಷಿಮಠದ ಪೂಜ್ಯ ಶ್ರೀ ಸಿದ್ಧರಾಮ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಮಹಿಳಾ ಸಮಾವೇಶ ನಡೆಯಿತು. ಮಾಜಿ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರು ಸಮಾವೇಶವನ್ನು ಉದ್ಘಾಟಿಸಿ "ಮಹಿಳೆ ಸಾಮಾಜಿಕ ಜೀವನದಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸುತ್ತಿದ್ದು ನಿತ್ಯ ಜೀವನದಲ್ಲಿ ಆಕೆ ನಿರ್ವಹಿಸುವ ಕೆಲಸಕ್ಕೆ ಬೆಲೆ ಕಟ್ಟಲಾಗದು' ಎಂದು ತಿಳಿಸಿದರು. ಮಹಿಳೆ ಗ್ರಾಮೀಣ ಪರಿಸರದಲ್ಲಿ ಮನೆಯೊಳಗೆ ಹಾಗೂ ಮನೆಯ ಹೊರಗೆ ದುಡಿದು ಕಷ್ಟಪಡುತ್ತಿದ್ದಾಳೆ. ಆದರೆ ಆಕೆಯ ದುಡಿಯೆಯ 'ಹಣವೆಲ್ಲ ಗಂಡಂದಿರ ಪಾಲಾಗುತ್ತಿದೆ' ಎಂದು ವಿಷಾದ ವ್ಯಕ್ತಪಡಿಸಿದರು.




ಪೂಜ್ಯ ಶ್ರೀ ಶ್ರೀ ಮಹಾಂತ ಶಿವಯೋಗಿಗಳವರಿಂದ ನುಡಿ ನಮನ

ಮಾಜಿ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಪ್ರಸ್ತುತ ಸಮಾಜದಲ್ಲಿ ಮಹಿಳೆಯರ ಪಾತ್ರದ ಬಗ್ಗೆ ಪ್ರಸ್ತಾಪಿಸಿದರು. ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕಿ ಶ್ರೀಮತಿ ಶಾಂತಾ ಇಮ್ರಾಪೂರ ಅವರು "ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನ' ವಿಷಯವನ್ನು ಕುರಿತು




ಮಾಜಿ ಕೇಂದ್ರ ಸಚಿವರೂ, ರಾಜ್ಯಸಭಾ ಸದಸ್ಯರೂ ಆದ ಶ್ರೀ ಶಿವರಾಜ ಪಾಟೀಲ್ ಅವರಿಂದ ಕೃಷಿ ಸಮಾವೇಶ ಉದ್ಘಾಟನೆ








ಶ್ರೀ ಶಿವರಾಜ ಪಾಟೀಲ್ ಅವರಿಂದ ಉದ್ಘಾಟನಾ ಭಾಷಣ




ಕೇಂದ್ರದ ರಾಜ್ಯ ಸಚಿವರಾದ ಶ್ರೀ ಆಸ್ಕರ್ ಫರ್ನಾಂಡಿಸ್ ಅವರಿಂದ ಕೃತಿ ಬಿಡುಗಡೆ




ಕೇಂದ್ರದ ರಾಜ್ಯ ಸಚಿವರಾದ ಶ್ರೀ ಆಸ್ಕರ್ ಫರ್ನಾಂಡಿಸ್ ಅವರಿಂದ ಭಾಷಣ

ತಮ್ಮ ಭಾವನೆಯನ್ನು ಹಂಚಿಕೊಂಡರು. 'ಸಮಾಜದಲ್ಲಿ ಮೌಲ್ಯ ಕುಡಿಯುತ್ತಿರುವುದಕ್ಕೆ ಮಹಿಳೆ ಬಲಿಪಶುವಾಗುತ್ತಿದ್ದಾಳೆ. ಮಹಿಳೆಯರ ಮೇಲಿನ ದೌರ್ಜನ್ಯ ಹೆಚ್ಚುತ್ತಿದೆ ಮಹಿಳೆಯರು ಶೇ. ೫೦ರಷ್ಟಿದ್ದರೂ ರಾಜಕೀಯ ಪ್ರಾತಿನಿಧ್ಯ ಇಲ್ಲದಂತಾಗಿದೆ. ಮಹಿಳಾಪರ ಕಾನೂನುಗಳು ಚಲಾವಣೆಗೆ ಬಾರದ ನಾಣ್ಯಗಳಾಗಿವೆ' ಎಂದು ಅಭಿಪ್ರಾಯಪಟ್ಟರು. ಬೆಳಗಾವಿ ಜಿಲ್ಲಾ ಕದಳಿ ವೇದಿಕೆ ಅಧ್ಯಕ್ಷೆ ಶ್ರೀಮತಿ ಶಶಿಕಲಾ ಅಣ್ಣಾಸಾಹೇಬ ಜೊಲ್ಲೆ ಅವರು 'ಸ್ತ್ರೀ ಮತ್ತು ವಚನ ಚಳುವಳಿ' ವಿಷಯವನ್ನು ಕುರಿತು ಡಾ. ಎಚ್.ಎಲ್. ಪುಷ್ಪ ಅವರು 'ಸ್ತ್ರೀ ಮತ್ತು ಸಾಹಿತ್ಯ' ವಿಷಯವನ್ನು ಕುರಿತು ವಿಚಾರ ಮಂಡಿಸಿದರು.

'ಸ್ತ್ರೀ ಮತ್ತು ರಾಜಕೀಯ' ವಿಷಯವನ್ನು ಕುರಿತು ಮಾತನಾಡಿದ ಮಾಜಿ ಶಾಸಕಿ ಶ್ರೀಮತಿ ಪ್ರಮೀಳಾ ನೇಸರ್ಗಿ ಅವರು' 'ಪುರುಷರ ರಾಜಕೀಯ ದಾಳಕ್ಕೆ ಬಲಿಯಾಗದೇ ಪ್ರತಿಯೊಬ್ಬ ಮಹಿಳೆಯರೂ ಚುನಾವಣೆಯಲ್ಲಿ ಸ್ಪರ್ಧಿಸುವ ಧೈರ್ಯ ತೋರಬೇಕು' ಎಂದು ಕರೆ ನೀಡಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವ ಶ್ರೀ ಪಿ.ಎಂ. ನರೇಂದ್ರಸ್ವಾಮಿ ಅವರು ಮಾತನಾಡಿ 'ಸರ್ಕಾರ ದೇವದಾಸಿ ಪದ್ಧತಿ ನಿರ್ಮೂಲನೆ ಮಾಡಲು ಕ್ರಮ ಕೈಗೊಂಡಿದೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರು ಒಂದಲ್ಲ ಒಂದು ದಬ್ಬಾಳಿಕೆಗೆ ಮತ್ತು ನಿರ್ಲಕ್ಷಕ್ಕೆ ಒಳಗಾಗುತ್ತಿದ್ದಾರೆ ಪ್ರಸ್ತುತ ರಾಜ್ಯ ಸರ್ಕಾರ ಹೆಣ್ಣು ಮಕ್ಕಳಿಗೆ ಆದ್ಯತೆ ನೀಡಿದೆ. ಭಾಗ್ಯಲಕ್ಷ್ಮಿ ಯೋಜನೆ, ಉಚಿತ ಪಠ್ಯ ಹಾಗೂ ಸಮವಸ್ತ್ರ ವಿತರಣೆ ಸೇರಿದಂತೆ ಅನೇಕ ರೀತಿಯ ಸೌಲಭ್ಯಗಳನ್ನು ನೀಡಿ ಪ್ರೋತ್ಸಾಹಿಸುತ್ತಿದೆ' ಎಂದು ತಿಳಿಸಿದರು.

ಸಕ್ಕರೆ, ಕೃಷಿ ಮಾರುಕಟ್ಟೆ ಸಚಿವ ಶ್ರೀ ಶಿವರಾಜ್ ಸಂಗಪ್ಪ ತಂಗಡಗಿ ಅವರು 'ಸಮಾಜ ಸೇವೆಯಲ್ಲಿ ಮಠಗಳ ಕೊಡುಗೆ ಅಪಾರವಾದುದು. ಸರ್ಕಾರ ಮಾಡುವ ಕೆಲಸಗಳನ್ನು ಮಠಗಳು ಮಾಡುತ್ತಿವೆ. ಈ ನಿಟ್ಟಿನಲ್ಲಿ ಶ್ರೀ ಸಿದ್ಧಗಂಗಾ ಮಠ ಮುಂಚೂಣಿಯಲ್ಲಿದೆ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಲೋಕ ಕಲ್ಯಾಣಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ" ಎಂದರು.

ಅಧ್ಯಕ್ಷತೆ ವಹಿಸಿದ್ದ ನಾಡೋಜ ಡಾ. ಕಮಲಾ ಹಂಪನಾ ಅವರು ಮಾತನಾಡಿ 'ಮಹಿಳೆಯರು ತಮ್ಮ ಕೀಳರಿಮೆ ಕಿತ್ತುಹಾಕಿ

ಪುರುಷರಿಗೆ ಸಮಾನವಾಗಿ ಅವಕಾಶಗಳನ್ನು ಪಡೆಯಬೇಕು. ಪುರುಷರು ಏನಂದುಕೊಂಡುಬಿಡುತ್ತಾರೋ ಎಂಬ ಭಯದಿಂದ ನಾನು ಅಬಲೆ, ಏನೂ ಮಾಡಲಾರೆ ಎಂಬ ಕೀಳರಿಮೆಯಿಂದ ಹಿಂದುಳಿಯುತ್ತಿದ್ದೇವೆ. ನಾನು ಯಾರಿಗೂ ಕಡಿಮೆಯಿಲ್ಲ. ಎಲ್ಲ ಕೆಲಸಗಳನ್ನು ಮಾಡಬಲ್ಲೆ ಎಂಬ ಆತ್ಮವಿಶ್ವಾಸವನ್ನು ರೂಢಿಸಿಕೊಂಡು ಬೆಳೆಯಬೇಕು ಪುರುಷರಿಂದ ಅವಕಾಶ ಕಸಿದುಕೊಳ್ಳುವುದು ಅಷ್ಟೊಂದು ಸುಲಭವಲ್ಲ. ನಮ್ಮ ಬಲ ಹೆಚ್ಚಿಸಿಕೊಂಡು ಅವಕಾಶ ಬಳಸಿಕೊಳ್ಳಬೇಕು' ಎಂದರು.

'ಒಬ್ಬ ಮಹಿಳೆಯನ್ನು ಐದು ಜನ ಹಂಚಿಕೊಳ್ಳುವ ಕಾಲ ಬರಬಹುದು. ಪುರುಷರಿಗಿಂತ ಮಹಿಳೆಯರ ಸಂಖ್ಯೆ ಗಣನೀಯವಾಗಿ ಇಳಿದಿದೆ. ಮಹಿಳೆಯರು ಭ್ರೂಣಹತ್ಯೆಗೆ ಅವಕಾಶ ಕೊಡಬಾರದು' ಎಂದು ಮನವಿ ಮಾಡಿದರು.

### ಸನ್ಮಾನ

ಇದೇ ಸಂದರ್ಭದಲ್ಲಿ ಮಾಜಿ ಸಚಿವೆಯರಾದ ಶ್ರೀಮತಿ ರಾಣಿ ಸತೀಶ್, ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್, ಅಬಕಾರಿ ಇಲಾಖೆ ಆಯುಕ್ತರಾದ ಶ್ರೀ ಬಸವರಾಜ ಕಣಜಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಹಾಲು ಒಕ್ಕೂಟದ ಅಧ್ಯಕ್ಷ ಶ್ರೀ ತಿಮ್ಮರಾಜು ಅವರನ್ನು ಸಾನ್ನಿಧ್ಯ ವಹಿಸಿದ್ದ ನಾಗನೂರು ರುದ್ರಾಕ್ಷಿಮಠದ ಪೂಜ್ಯಶ್ರೀ ಸಿದ್ಧರಾಮ ಮಹಾಸ್ವಾಮಿಗಳು ಸನ್ಮಾನಿಸಿದರು.



ಕೇಂದ್ರದ ಮಾಜಿ ಸಚಿವ
ಶ್ರೀ ಸಿ.ಎಂ. ಇಬ್ರಾಹಿಂ ಅವರಿಂದ ನುಡಿ ನಮನ



ಜಗದ್ಗುರು ಶ್ರೀ ಶ್ರೀ ಬಾಲಗಂಗಾಧರನಾಥ
ಮಹಾಸ್ವಾಮಿಗಳಿಂದ ಪೂಜ್ಯ ಶ್ರೀ ಶ್ರೀಗಳವರಿಗೆ
ಗೌರವ ಸಮರ್ಪಣೆ




ಆದಿಚುಂಚನಗಿರಿ ಜಗದ್ಗುರು ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳವರಿಂದ ನುಡಿ ಸಂದೇಶ









ಪರಮಪೂಜ್ಯ ಶ್ರೀ ಶ್ರೀಗಳವರಿಂದ
ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳವರಿಗೆ
ಗೌರವ ಸಮರ್ಪಣೆ



ಕೇಂದ್ರ ಭೂಸಾರಿಗೆ ರಾಜ್ಯ ಸಚಿವ ಶ್ರೀ ಕೆ.ಹೆಚ್. ಮುನಿಯಪ್ಪ
ಅವರಿಗೆ ಪೂಜ್ಯ ಶ್ರೀಗಳವರಿಂದ ಆಶೀರ್ವಾದ



ಮಾಜಿ ಕೇಂದ್ರ ಸಚಿವರಾದ ಶ್ರೀ ಜಾರ್ಜ್ ಫರ್ನಾಂಡಿಸ್
ಅವರಿಂದ ನುಡಿ ನಮನ

ನಾಗನೂರು ಶ್ರೀಗಳು ತಮ್ಮ ಆಶೀರ್ವಚನದಲ್ಲಿ 'ವೀರಶೈವ ಮಠಗಳು ಸಮಾಜಕ್ಕೆ ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ಪ್ರಸ್ತಾಪಿಸಿ ಈ ನಿಟ್ಟಿನಲ್ಲಿ ಶ್ರೀ ಸಿದ್ಧಗಂಗಾ ಮಠ ನಮಗೆ ಮಾರ್ಗದರ್ಶನ ಹಾಗೂ ಸಮಾಜದ ಕೆಲಸದಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆ ನೀಡಿದೆ' ಎಂದರು.

### ಸಾಹಿತ್ಯ ಸಮಾವೇಶ

ಮಂಗಳವಾರ ಮಧ್ಯಾಹ್ನ ಶ್ರೀ ಗವಿಸಿದ್ಧೇಶ್ವರ ಮಠದ ಪೂಜ್ಯ ಶ್ರೀ ಗವಿಸಿದ್ಧೇಶ್ವರ ಮಹಾಸ್ವಾಮಿಗಳು ಹಾಗೂ ಬೇಲಿಮಠದ ಪೂಜ್ಯ ಶ್ರೀ ಶಿವರುದ್ರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಸಾಹಿತ್ಯ ಸಮಾವೇಶ ನಡೆಯಿತು.

ಸಮಾವೇಶವನ್ನು ಉದ್ಘಾಟಿಸಿದ ಇಂಧನ ಸಚಿವ ಶ್ರೀ ಕೆ.ಎಸ್. ಈಶ್ವರಪ್ಪ ಅವರು ಮಾತನಾಡಿ "ಬಸವಣ್ಣ, ಕನಕದಾಸ, ಅಂಬೇಡ್ಕರ್ ಶಂಕರಾಚಾರ್ಯ ಮೊದಲಾದ ಮಹಾನ್ ದಾರ್ಶನಿಕರನ್ನು ಒಂದೊಂದು ಜಾತಿಗೆ ಸೀಮಿತಗೊಳಿಸಿರುವ ಈ ಸಂದರ್ಭದಲ್ಲಿ ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀಗಳವರು ಸರ್ವಧರ್ಮದ ಅನುಯಾಯಿಗಳೂ, ಪೂಜನೀಯ ಗುರುಗಳೂ ಆಗಿದ್ದಾರೆ. ಅವರು ಸರ್ವಧರ್ಮವನ್ನು ಪ್ರೀತಿಸುವ ಮಹಾಮಾನವತಾವಾದಿಗಳು ಪೂಜ್ಯರ ಮಾರ್ಗದರ್ಶನ ನಮ್ಮೆಲ್ಲರಿಗೂ ಬೇಕಾಗಿದೆ" ಎಂದರಲ್ಲದೆ; 'ಸಮಾಜದಲ್ಲಿ ತುಳಿತಕ್ಕೊಳಗಾದವರನ್ನು ಮೇಲೆತ್ತಲು ಶ್ರಮಿಸಿದ ಜಗಜ್ಯೋತಿ ಶ್ರೀ ಬಸವಣ್ಣನವರನ್ನು ಲಿಂಗಾಯಿತ, ಸಂತ ಕನಕದಾಸರನ್ನು ಕುರುಬ, ಸಂವಿಧಾನ ಶಿಲ್ಪಿ ಅಂಬೇಡ್ಕರರನ್ನು ದಲಿತ, ಆದಿಗುರು ಶಂಕರಾಚಾರ್ಯರನ್ನು ಬ್ರಾಹ್ಮಣ ವರ್ಗಕ್ಕೆ ಸೀಮಿತಗೊಳಿಸಲಾಗಿದೆ. ಇಂತಹ ಮತೀಯ ಸಂಕುಚಿತ ಭಾವನೆಗಳೇ ತುಂಬಿರುವ ಈ ಸಮಾಜದಲ್ಲಿ ವಿವಿಧ ಜಾತಿಗಳಿಗೆ ಸೇರಿ ಬಡ ದೀನದಲಿತರ ವಿದ್ಯಾರ್ಥಿಗಳಿಗೆ ಆಶ್ರಯನೀಡಿ ಅವರಿಗೆ ಅನ್ನ ದಾಸೋಹದ ಜೊತೆಗೆ ಜ್ಞಾನದಾಸೋಹವನ್ನು ನೀಡಿ ಅವರೆಲ್ಲರ ಬದುಕಿಗೆ ಬೆಳಕಾಗಿರುವ ಪೂಜ್ಯಶ್ರೀಗಳವರು ನಮಗೆಲ್ಲ ನಡೆದಾಡುವ ದೇವರಾಗಿದ್ದಾರೆ. ಪೂಜ್ಯ ಶ್ರೀಗಳವರನ್ನು ಒಂದು ಜಾತಿಗೆ ಸೀಮಿತಗೊಳಿಸುವುದು ಸರಿಯಲ್ಲ' ಎಂದರು.

### ಸಿದ್ಧಗಂಗಾ ವಿಶೇಷ ಸಂಚಿಕೆ ಬಿಡುಗಡೆ

ಪ್ರೊ. ಹೆಚ್.ವಿ. ವೀರಭದ್ರಯ್ಯ, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಹಾಗೂ ಶ್ರೀ ಎಂ. ರೇಣುಕಾರಾಧ್ಯ ಅವರ ಸಂಪಾದಕತ್ವದಲ್ಲಿ ಹೊರತಂದ 'ನಿಬ್ಬೆರಗು' ಸಿದ್ಧಗಂಗಾ ವಿಶೇಷ ಸಂಪುಟವನ್ನು ಲೋಕಾರ್ಪಣೆ ಮಾಡಿದ ಧರ್ಮಸ್ಥಳದ ಧರ್ಮಾಧಿಕಾರಿ ಪೂಜ್ಯ ಡಾ. ವೀರೇಂದ್ರ ಹೆಗಡೆ ಅವರು ಮಾತನಾಡಿ 'ಪೂಜ್ಯ ಡಾ. ಶ್ರೀ

ಶ್ರೀ ಶಿವಕುಮಾರ ಸ್ವಾಮೀಜಿಯವರ ವ್ಯಕ್ತಿತ್ವ ಬಾಹುಬಲಿ ವ್ಯಕ್ತಿತ್ವಕ್ಕೆ ಸರಿಸಮಾನವಾದುದು' ಎಂದು ಹೇಳಿದರಲ್ಲದೆ 'ಪೂಜ್ಯ ಸ್ವಾಮೀಜಿಯವರು ವಿಶ್ವವೇ ಮೆಚ್ಚುವಂತಹ ಸಾಧನೆ ಮಾಡಿದ್ದರೂ ಮಾಡಿದುದೆಲ್ಲಾ ಅತ್ಯಲ್ಪ ಎಂಬ ವಿನೀತ ಭಾವನೆಯಿಂದ ನುಡಿಯುತ್ತಾರೆ. ಅವರ ಕತೃತ್ವ ಶಕ್ತಿ ನಮಗೆಲ್ಲ ದಾರಿದೀಪವಾಗಿದೆ' ಎಂದರು.

ಇಂದಿನ ಯುವಪೀಳಿಗೆ ಜೀವನದಲ್ಲಿ ಸಮತೋಲನ ಕಾಯ್ದುಕೊಳ್ಳುವ ವ್ಯವಧಾನ ಇಲ್ಲವಾಗಿದೆ. ಇಂದಿನ ಬಹುತೇಕ ಯುವ ಪೀಳಿಗೆಗೆ ಆಧುನಿಕ ಜೀವನಶೈಲಿ, ಪಬ್‌ಸಂಸ್ಕೃತಿ ಬೇಕಾಗಿದೆಯೋ ಹೊರತು ನಿಜ ಜೀವನದಲ್ಲಿ ಸಮಚಿತ್ತತೆ ಕಾಯ್ದುಕೊಳ್ಳುವ ವ್ಯವದಾನ ಅವರಲ್ಲಿ ಕಾಣದಾಗಿದೆ ಎಂದು ಕಳವಳವನ್ನು ವ್ಯಕ್ತಪಡಿಸಿದ ಡಾ. ವೀರೇಂದ್ರ ಹೆಗಡೆಯವರು 'ಸಿದ್ಧಗಂಗಾ ಮಠಕ್ಕೂ ಶ್ರೀಕ್ಷೇತ್ರ ಧರ್ಮಸ್ಥಳಕ್ಕೂ ನಿಕಟ ಸಂಬಂಧವಿದೆ. ಪೂಜ್ಯ ಶ್ರೀಗಳು ಹಲವು ಬಾರಿ ಧರ್ಮಸ್ಥಳಕ್ಕೆ ದಯಮಾಡಿಸಿ ಅಲ್ಲಿ ನಿರ್ಮಾಣವಾದ ಹಲವು ವಿದ್ಯಾಸಂಸ್ಥೆಗಳ ಕಟ್ಟಡಗಳಿಗೆ ತಮ್ಮ ಅಮೃತ ಹಸ್ತದಿಂದ ಶಿಲಾನ್ಯಾಸ ನೆರವೇರಿಸಿದ್ದಾರೆ. ಅವರ ಶಿವಹಸ್ತದಿಂದ ಶಿಲಾನ್ಯಾಸಗೊಂಡ ಕಟ್ಟಡಗಳು ನಿಗದಿತ ಅವಧಿಗೂ ಮುನ್ನವೇ ಪೂರ್ಣಗೊಂಡಿವೆ' ಎಂದರು.

'ಪೂಜ್ಯ ಶ್ರೀಗಳವರ ಶತಮಾನೋತ್ಸವ ಸವಿನೆನಪಿಗಾಗಿ ತುಮಕೂರು ಜಿಲ್ಲೆಯ ಸರಕಾರಿ ಶಾಲೆಗಳಿಗೆ ೨೫ ಲಕ್ಷ ರೂ. ವೆಚ್ಚದ ಡೆಸ್ಕ್‌ಗಳನ್ನು ಧರ್ಮಸ್ಥಳದ ಮಂಜುನಾಥೇಶ್ವರ ಟ್ರಸ್ಟ್ ವತಿಯಿಂದ ಉಚಿತವಾಗಿ ವಿತರಿಸಲಾಗುವುದು' ಎಂದು ಈ ಸಂದರ್ಭದಲ್ಲಿ ಪ್ರಕಟಿಸಿದರು.

'ಜ್ಞಾನಜ್ಯೋತಿ' ಸಿ.ಡಿ.ಯನ್ನು ಲೋಕಾರ್ಪಣೆ ಮಾಡಿದ ಮಾಜಿ ಉಪ ಮುಖ್ಯಮಂತ್ರಿ ಶ್ರೀ ಎಂ.ಪಿ. ಪ್ರಕಾಶ್ ಅವರು ಮಾತನಾಡಿ 'ಸಾಹಿತ್ಯ ಸಮಾಜದ ಸೃಜನಶೀಲ ಉತ್ಪನ್ನವಾಗಿದ್ದು ಅದಕ್ಕೆ ಹದಗೆಟ್ಟ ಸಮಾಜದ ವ್ಯವಸ್ಥೆಯನ್ನು ತಿದ್ದುವ, ಸರಿಪಡಿಸುವ ಅದ್ಭುತ ಶಕ್ತಿಯಿದೆ. ಬಸವಾದಿ ಶರಣರು ೧೨ನೇ ಶತಮಾನದಲ್ಲಿ ನಡೆದ ವಚನ ಚಳುವಳಿಯ ಸಂದೇಶವನ್ನು ನಾಡಿನ ಮಠಮಾನ್ಯಗಳು ಸಾರುತ್ತಾ ಬಂದಿವೆ. ದುರ್ಬಲರ ಮನಸ್ಥಿತಿಯನ್ನು ಅರಿತುಕೊಳ್ಳಲು ಸಾಹಿತ್ಯ ಪ್ರಮುಖ ಸಾಧನವಾಗಿದ್ದು ಸಿದ್ಧಗಂಗಾ ಶ್ರೀಗಳು ದುರ್ಬಲರ ಕಲ್ಯಾಣದಲ್ಲೇ ತಮ್ಮ ಜೀವನದ ಸಾರ್ಥಕತೆಯನ್ನು ಕಂಡುಕೊಂಡಿದ್ದಾರೆ' ಎಂದು ತಿಳಿಸಿದರು.

'ದುರ್ಬಲರ ಭಿನ್ನಾಭಿಪ್ರಾಯಗಳನ್ನು ತಿಳಿಯುವ ಪ್ರಜಾಪ್ರಭುತ್ವ ನಮ್ಮದಾಗಬೇಕು. ಆದರೆ, ಅದಕ್ಕಾಗಿ ಮಿಡಿಯುವುದನ್ನು

ಶಾಸಕ ಡಾ. ಜಿ. ಪರಮೇಶ್ವರ್ ಅವರಿಂದ ನುಡಿ ನಮನ

ಸಂಸದ ಶ್ರೀ ಜಿ.ಎಸ್. ಬಸವರಾಜು ಅವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ

ಕೃಷಿ ಸಮಾವೇಶದಲ್ಲಿ ಪದ್ಮಶ್ರೀ ಡಾ. ಎಂ. ಮಹದೇವಪ್ಪ ಅವರಿಂದ ಅಧ್ಯಕ್ಷ ಭಾಷಣ





ಪೂಜ್ಯ ಶ್ರೀ ಶ್ರೀ ಬಸವಲಿಂಗ ಪಟ್ಟದ್ದೇವರು ಅವರಿಂದ ನುಡಿ ಸಂದೇಶ

ಅರಿಯಬಲ್ಲ ಮತ, ಧರ್ಮ ಜಾತಿಯ ವಿಷಯಗಳಲ್ಲಿ ತಾಳ್ಮೆ ಕಂಡುಕೊಳ್ಳುವ ಸಂಸ್ಕೃತಿ ನಮ್ಮಿಂದ ದೂರವಾಗುತ್ತಿದೆ' ಎಂದು ವಿಷಾದಿಸಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಡಾ. ಸಾ.ಶಿ. ಮರುಳಯ್ಯ ಅವರು ತಮ್ಮ ನುಡಿಗಳಲ್ಲಿ 'ಸಾಹಿತ್ಯ ಮನಸ್ಸನ್ನು ಅರಳಿಸುವ ಸಂಜೀವಿನಿ. ಉತ್ತಮ ಗ್ರಂಥಗಳು ಸದಾ ನಮಗೆ ದಾರಿದೀಪವಾಗಿದೆ. ಪೂಜ್ಯ ಶ್ರೀಗಳು ಸಾಹಿತಿಗಳು, ಸಾಹಿತ್ಯ ಪ್ರೇಮಿಗಳು, ಅವರ ಅನುಭಾವ ನುಡಿಗಳನ್ನು ಅರ್ಥಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಂಡರೆ ಬಾಳು ಬಂಗಾರವಾಗುತ್ತಿದೆ. ನಾಡಿನ ವಿವಿಧ ಕ್ಷೇತ್ರಗಳಲ್ಲಿ ಪೂಜ್ಯ ಶ್ರೀಗಳು ಸಲ್ಲಿಸುತ್ತಿರುವ ಅನುಪಮ ಸೇವೆ ಅನನ್ಯವಾದುದು' ಎಂದರು.

ಸಾಹಿತಿ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರು ರಚಿಸಿದ 'ಕರ್ನಾಟಕ ರತ್ನ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು' ಕೃತಿಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ಶ್ರೀ ಮನು ಬಳಿಗಾರ್, ಹರಳೂರು ಶಿವಕುಮಾರ್ ಬರೆದ ಕವನ ಸಂಕಲನ 'ಭುವನದ ಭಾಗ್ಯ' ಕೃತಿಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಎಸ್. ಬಸವಾರಾಧ್ಯ ಅವರು ಲೋಕಾರ್ಪಣೆ ಮಾಡಿದರು.

**ವಿಷಯ ಮಂಡನೆ**

ಹಿರಿಯ ಸಂಶೋಧಕರಾದ ಡಾ. ಎಂ. ಚಿದಾನಂದಮೂರ್ತಿ ಅವರು 'ಸಾಹಿತ್ಯ-ಸಂಶೋಧನೆ' ಕುರಿತು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು 'ವಚನ ಸಾಹಿತ್ಯ-ಜನಪದ ಸಾಹಿತ್ಯ' ವಿಷಯವನ್ನು ಕುರಿತು ವಿಚಾರ

ಮಹಿಳಾ ಸಮಾವೇಶದ ಉದ್ಘಾಟನೆ



ಮಾಜಿ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ ಸನ್ಮಾನ



ಮಾಜಿ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರಿಗೆ ಸನ್ಮಾನ



ಶ್ರೀಮತಿ ಪ್ರಮೀಳಾ ನೇಸರ್ಗಿ ಅವರಿಗೆ ಸನ್ಮಾನ

ಮಂಡಿಸಿದರು. ಹಿರಿಯ ಪತ್ರಕರ್ತ ಶ್ರೀ ರಂಜಾನ್ ದರ್ಗಾ ಅವರು 'ಶರಣ ವಿಚಾರ ಧಾರೆಯ ಪ್ರಸ್ತುತತೆ' ವಿಷಯವನ್ನು, ತುಮಕೂರು ಜಿಲ್ಲಾಧಿಕಾರಿಗಳಾದ ಡಾ. ಸಿ. ಸೋಮಶೇಖರ್ ಅವರು 'ಮಾನವೀಯ ಮೌಲ್ಯಗಳು' ವಿಷಯವನ್ನು, ಹಿರಿಯ ವಿಮರ್ಶಕರಾದ ಶ್ರೀ ನಾ. ಮೊಗಸಾಲೆ ಅವರು 'ಸಮುದಾಯದ ಸಾಮರಸ್ಯ – ಸಾಹಿತ್ಯ' ಹಾಗೂ ವಿಚಾರವಾದಿಗಳಾದ ಡಾ. ಕೆ.ಎಸ್. ಭಗವಾನ್ ಅವರು 'ಸಾಹಿತ್ಯ, ಸಮಾಜ' ವಿಷಯವನ್ನು ಕುರಿತು ತಮ್ಮ ಚಿಂತನೆಗಳನ್ನು ಅಭಿವ್ಯಕ್ತಿಪಡಿಸಿದರು.

ವೈದ್ಯಕೀಯ ಶಿಕ್ಷಣ ಸಚಿವರಾದ ಶ್ರೀ ರಾಮಚಂದ್ರೇಗೌಡ, ಕರ್ನಾಟಕ ಯೋಜನಾ ಮಂಡಳಿಯ ಉಪಾಧ್ಯಕ್ಷರಾದ ಶ್ರೀ ಡಿ. ಶಂಕರಮೂರ್ತಿ ಅವರು ತಮ್ಮ ನುಡಿನಮನದಲ್ಲಿ ಪರಮಪೂಜ್ಯರು ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು.

ಅಧ್ಯಕ್ಷತೆ ವಹಿಸಿದ್ದ ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿಗಳಾದ ಡಾ. ಎಂ.ಎಂ. ಕಲಬುರ್ಗಿ ಅವರು ಇಂದಿನ ಸಮಾಜದಲ್ಲಿ ಸಾಹಿತ್ಯದ ಪ್ರಸ್ತುತತೆಯನ್ನು ವಿವರಿಸಿ ಇಂತಹ ಸಮಾವೇಶವನ್ನು ವ್ಯವಸ್ಥೆ ಮಾಡಿರುವ ಪೂಜ್ಯ ಶ್ರೀಗಳವರ ಸಾಹಿತ್ಯ ಪ್ರೇಮವನ್ನು ಪ್ರಶಂಸಿಸಿದರು.

ವೇದಿಕೆಯಲ್ಲಿ ಶತಮಾನೋತ್ಸವ ಸಮಿತಿಯ ಅಧ್ಯಕ್ಷರಾದ ನ್ಯಾಯಮೂರ್ತಿ ವಿ.ಎಸ್. ಮಳಿಮಠ, ಸಂಚಾಲಕರಾದ ಶ್ರೀ ವಿ. ಸೋಮಣ್ಣ, ತುಮಕೂರು ಜಿಲ್ಲಾ ಪಂಚಾಯತ್ ಅಧ್ಯಕ್ಷ ಶ್ರೀ ಕೃಷ್ಣಮೂರ್ತಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

### ಧಾರ್ಮಿಕ ಸಮಾವೇಶ – ರಾಷ್ಟ್ರೀಯ ಭಾವೈಕ್ಯತೆ

ಫೆಬ್ರವರಿ ೫ರ ಬೆಳಿಗ್ಗೆ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಧಾರ್ಮಿಕ ಸಮಾವೇಶ ನಡೆಯಿತು. ಲೋಕಸಭೆಯ ವಿರೋಧಪಕ್ಷದ ನಾಯಕರೂ ಮಾಜಿ ಉಪ ಪ್ರಧಾನ ಮಂತ್ರಿಗಳೂ ಆದ ಶ್ರೀ ಎಲ್.ಕೆ. ಅಡ್ವಾನಿ ಅವರು ಧಾರ್ಮಿಕ ಸಮಾವೇಶವನ್ನು ರಿಮೋಟ್ ಒತ್ತಿ ವೇದಿಕೆ ಮುಂದಿದ್ದ ೧೦೧ ಜ್ಯೋತಿಗಳನ್ನು ಬೆಳಗಿಸುವ ಮೂಲಕ ಉದ್ಘಾಟಿಸಿದರು.

ಶ್ರೀ ಎಲ್.ಕೆ. ಅಡ್ವಾನಿ ಅವರು ವೇದಿಕೆಗೆ ಬರುವ ಮುನ್ನ ಶ್ರೀಗಳವರ ಕಛೇರಿಗೆ ತೆರಳಿ ಅವರ ದಿವ್ಯ ಚರಣಗಳಿಗೆ ಭಕ್ತಿಪೂರ್ವಕ ಪ್ರಣಾಮಗಳನ್ನು ಸಲ್ಲಿಸಿ ಆಶೀರ್ವಾದ ಪಡೆದರು. ಅವರು ಈ ಸಂದರ್ಭದಲ್ಲಿ ಮಾತನಾಡಿ 'ಶ್ರೀಗಳವರ ದರ್ಶನ ಮತ್ತು ಆಶೀರ್ವಾದ





ಪಡೆಯುವುದೇ ಭಾಗ್ಯ. ಈ ದಿನ ನನ್ನ ಜೀವನದ ಮಹಾ ಸುದಿನ' ಎಂದು ಹೇಳಿ ಧನ್ಯತೆಯನ್ನು ಅನುಭವಿಸಿದರು.

ಅವರು ತಮ್ಮ ಉದ್ಘಾಟನಾ ಭಾಷಣದಲ್ಲಿ "ಇಂದು ಪರಿಸರ ಮಾಲಿನ್ಯದ ಬಗ್ಗೆ ಮಾತನಾಡುವ ಕಾಲ ಮುಗಿಯಿತು. ಈಗ ಏನಿದ್ದರೂ ಮನುಷ್ಯರ ಮನಸ್ಸುಗಳು ಮಾಲಿನ್ಯದ ಬಗ್ಗೆ ಮಾತನಾಡುವ ಕಾಲ. ಮನುಷ್ಯನ ಮನಸ್ಸುಗಳು ಶುದ್ಧವಾಗಿ, ಭಯೋತ್ಪಾದನೆ ಅಳಿಯಬೇಕು. ಭಯೋತ್ಪಾದನೆ ಅಳಿದು ಶಾಂತಿ ನೆಲಸಬೇಕಾದರೆ ನಾವೆಲ್ಲ ಪರಮಪೂಜ್ಯ ಶ್ರೀಗಳವರು ಅನುಸರಿಸಿದ ಮಾರ್ಗದಲ್ಲಿ ನಡೆಯಬೇಕು. ಜಾತ್ಯಾತೀತ ಹೆಸರಿನಲ್ಲಿ ಕೆಲವರು ಧರ್ಮವನ್ನು ಕೀಳಾಗಿ ಚಿತ್ರಿಸುವ ಕೆಲಸ ಮಾಡುತ್ತಿದ್ದಾರೆ. ಇದರಿಂದ ದೇಶದಲ್ಲಿ ಒಗ್ಗಟ್ಟು ಮರೆಯಾಗಿ ಭಯೋತ್ಪಾದನೆ ಹೆಚ್ಚಾಗುತ್ತಿದೆ. ದೇಶದಲ್ಲಿ ಒಗ್ಗಟ್ಟು ಮೂಡಬೇಕಿದ್ದರೆ ಮತ್ತು ಭಯೋತ್ಪಾದಕರ ವಿಧ್ವಂಸಕ ಕೃತ್ಯಗಳನ್ನು ಹತ್ತಿಕ್ಕಬೇಕಿದ್ದರೆ ಧರ್ಮಮಾರ್ಗವನ್ನು ಅನುಸರಿಸಬೇಕು. ಇದು ಧರ್ಮದಿಂದ ಆಗುವ ಕೆಲಸವೇ ಹೊರತು ರಾಜಕಾರಣಿಗಳಿಂದಲ್ಲ. ಈ ನಿಟ್ಟಿನಲ್ಲಿ ಎಲ್ಲ ಧರ್ಮಗುರುಗಳೂ ಕೈಜೋಡಿಸಬೇಕು' ಎಂದು ಮನವಿ ಮಾಡಿದರು.

### ಆಧುನಿಕ ಭಾರತದ ಋಷಿ

ಶ್ರೀ ಅಡ್ವಾನಿ ಅವರು ತಮ್ಮ ಭಾಷಣದಲ್ಲಿ "ಪೂಜ್ಯ ಶ್ರೀಗಳವರು ದೇಶಕ್ಕೆ ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿ, ನೈಜ ಜಾತ್ಯಾತೀತ ಮನೋಭಾವ ಮೈಗೂಡಿಸಿಕೊಂಡು ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಉಚಿತವಾಗಿ ವಿದ್ಯಾದಾನ, ಅನ್ನದಾನ ಮಾಡುತ್ತಿರುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಧುನಿಕ ಭಾರತದ ಋಷಿ" ಎಂದು ಬಣ್ಣಿಸಿದರು. "ದೇಶದಲ್ಲಿ ಸಾವಿರಾರು ಪವಿತ್ರ ಸ್ಥಳಗಳಿವೆ. ಅಂತೆಯೇ ಕರ್ನಾಟಕದಲ್ಲಿಯೂ ಅನೇಕ ಮಠಗಳಿವೆ. ಅವುಗಳ ಪೈಕಿ ಶ್ರೀ ಸಿದ್ಧಗಂಗಾ ಕ್ಷೇತ್ರ ಅತ್ಯಂತ ಪವಿತ್ರ ಕ್ಷೇತ್ರವಾಗಿದೆ" ಎಂದರು.

ನಾವಿಂದು ಆದರ್ಶ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಬದುಕಬೇಕಾಗಿದೆ. ಶ್ರೀಗಳು ಸಾವಿರಾರು ಮಕ್ಕಳಿಗೆ ಶ್ರೀಮಠದಲ್ಲಿ ಜಾತಿ, ಮತ, ಭೇದವಿಲ್ಲದೆ ವಸತಿ ಕಲ್ಪಿಸಿ ಜ್ಞಾನ ದಾಸೋಹ, ಅನ್ನದಾಸೋಹ ಮಾಡುತ್ತಿದ್ದಾರೆ. ಇಂದಿನ ಮಕ್ಕಳು ಮುಂದಿನ ಭಾರತದ ಭವ್ಯ ಭವಿಷ್ಯ ಬರೆಯುವ ಭಾಗ್ಯವನ್ನು ಪಡೆಯಬೇಕು ಎಂಬುದು ಸ್ವಾಮೀಜಿಯವರ ಆಶಯ. ಇಂತಹ ಇಳಿವಯಸ್ಸಿನಲ್ಲಿಯೂ ೧೮ ಗಂಟೆ ಕೆಲಸ ಮಾಡುತ್ತಿದ್ದಾರೆ. ಇಂತಹ ಸಂತರು ಈ ದೇಶದಲ್ಲೇ ಅಲ್ಲ ಇಡೀ ವಿಶ್ವದಲ್ಲೇ ಇಲ್ಲ. ಶ್ರೀಗಳ



ಚಿತ್ರನಟಿ ಶ್ರೀಮತಿ ಉಮಾಶ್ರೀ ಅವರಿಗೆ ಸನ್ಮಾನ



ಅಬಕಾರಿ ಆಯುಕ್ತರಾದ ಶ್ರೀ ಬಸವರಾಜ ಕಣಜಿ ಅವರಿಗೆ ಸನ್ಮಾನ



ಡಾ. ಕಮಲಾ ಹಂಪನಾ ಅವರಿಂದ ಅಧ್ಯಕ್ಷ ಭಾಷಣ




ಇಂಧನ ಸಚಿವರಾದ ಶ್ರೀ ಕೆ.ಎಸ್. ಈಶ್ವರಪ್ಪ ಅವರಿಂದ ಸಾಹಿತ್ಯ ಸಮಾವೇಶದ ಉದ್ಘಾಟನೆ

ತಮ್ಮ ೧೦೧ನೇ ವರ್ಷದಲ್ಲಿಯೂ ಕ್ರಿಯಾಶೀಲರಾಗಿ ಬಸವಣ್ಣನವರ ಆದರ್ಶಗಳನ್ನು, ಜೀವನ ಸಿದ್ಧಾಂತಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಗೊಳಿಸುತ್ತಿದ್ದ ಅವರಿಗೆ 'ಭಾರತ ರತ್ನ' ಪ್ರಶಸ್ತಿ ನೀಡಬೇಕು. ಭಾರತ ರತ್ನ ಪ್ರಶಸ್ತಿಗೆ ಗೌರವ ಬರಬೇಕಿದ್ದರೆ ಡಾ. ಶ್ರೀ ಶಿವಕುಮಾರ ಸ್ವಾಮೀಜಿಯವರಿಗೆ 'ಭಾರತ ರತ್ನ' ನೀಡಬೇಕು" ಎಂದರು.

'ನಾನು ದೇಶದ ಸಾಕಷ್ಟು ಮಠಗಳಿಗೆ ಹೋಗಿದ್ದೇನೆ. ಹತ್ತಾರು ಸ್ವಾಮೀಜಿಗಳಿಂದ ಆಶೀರ್ವಾದ ಪಡೆದಿದ್ದೇನೆ. ಈ ಸಾಧು ಸಂತರ ಸತ್ಸಂಗದಲ್ಲಿ ನನ್ನಲ್ಲಿನ ದೋಷಗಳನ್ನು ಕಳೆದುಕೊಂಡಿದ್ದೇನೆ. ಹೀಗಾಗಿ ವಿಜಯವಾಡದಲ್ಲಿ ನಡೆಯುತ್ತಿದ್ದ ಬಿ.ಜೆ.ಪಿ. ರಾಜಕೀಯ ಸಮಾವೇಶವನ್ನು ಕೈಬಿಟ್ಟು ಶ್ರೀಗಳವರ ಕೃಪೆಗೆ ಪಾತ್ರರಾಗಲು ಇಲ್ಲಿಗೆ ಆಗಮಿಸಿದ್ದೇನೆ. ಇದು ನನ್ನ ಪರಮ ಸೌಭಾಗ್ಯದ ದಿನ' ಎಂದು ಭಾವುಕರಾಗಿ ನುಡಿದರು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಹಾಗೂ ಕರ್ನಾಟಕ ಜಾನಪದ ಅಕಾಡಮಿ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ "ಇಲ್ಲಿ ನಾವೂ ನೀವೂ ಸೇರಲೇ ಇಲ್ಲ. ಮುಖಕ್ಕೆ ಮುಖ, ಎದೆಗೆ ಎದೆ, ಹತ್ತಿರ ಬಂದು ಮಾತಾಡಲೇ ಇಲ್ಲ. ನಮ್ಮ ಮಧ್ಯೆ ಸದಾ ಗಾಳಿ, ಮಳೆ, ಕೆಸರು. ತಂತಿ ಕಂಬಗಳುರುಳಿ ಇದ್ದ ಸೇತುವೆಯು ಮುರಿದು ಅಲ್ಲಿನ ಗಾಡಿ ಅಲ್ಲೆ; ಇಲ್ಲಿನ ಗಾಡಿ ಇಲ್ಲೆ" – ಇವು ನಮ್ಮ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ ಒಂದು ಕವನದ ನಾಲ್ಕು ಸಾಲುಗಳು. ಕವಿಯ ಈ ವಸ್ತುನಿಷ್ಠ ನುಡಿಗಳೇ ನಾವೀಗ ಸೇರಿರುವ ಧಾರ್ಮಿಕ ಸಮಾವೇಶದಲ್ಲಿ ನಡೆಸಬೇಕಾದ 'ರಾಷ್ಟ್ರೀಯ ಭಾವೈಕ್ಯತೆ'ಯ ಚಿಂತನೆಗೆ ಪೀಠಿಕೆಯಾಗಬೇಕಾಗಿದೆ.

ಸಮಕಾಲೀನ ಸನ್ನಿವೇಶದಲ್ಲಿ ತಮ್ಮ ಇಡೀ ಬದುಕನ್ನು ಲೋಕಸೇವೆಗೆ ಅರ್ಪಿಸಿಕೊಂಡಿರುವ ಮಹಾಚೇತನವೊಂದರ ಜನ್ಮಶತಮಾನೋತ್ಸವದ ಅಂಗವಾಗಿ ಈ ಸಮಾವೇಶ ಸೇರಿರುವುದು ಸಮುಚಿತವಾಗಿದೆ ಎಂದು ನಾನು ಭಾವಿಸುತ್ತೇನೆ. ಈ ಸಮಾವೇಶದ ಚಿಂತನ ವಸ್ತು 'ರಾಷ್ಟ್ರೀಯ ಭಾವೈಕ್ಯತೆ'. ಇತ್ತೀಚಿನ ದಿನಗಳಲ್ಲಿ ಈ ವಿಷಯವೂ ತನ್ನ ಅರ್ಥ ಕಳೆದುಕೊಂಡಿರುವ ಕಾರಣ, ಅದಕ್ಕೆ








ಶ್ರೀ ಕೆ.ಎಸ್. ಈಶ್ವರಪ್ಪ ಅವರಿಂದ ಉದ್ಘಾಟನಾ ಭಾಷಣ

ಅಂತಃಕರಣದ ಅರ್ಥ ತಂದುಕೊಡುವ ಸಲುವಾಗಿ ಸಂಯೋಜಿಸಿರುವ ಸಮಾವೇಶವಿದು.

ಇಲ್ಲಿಗೆ ೧೪೦ ವರ್ಷಗಳ ಹಿಂದೆ ಹೆಚ್.ಜಿ. ವೆಲ್ಸ್ ಎಂಬ ತತ್ತ್ವಜ್ಞಾನಿ ಹೇಳಿರುವ ಒಂದು ಮಾತಿದೆ. "ಮಾನವನ ಇತಿಹಾಸ ಈಗ ಬೋಧಕ ಮತ್ತು ಬಾಧಕರ ಮಧ್ಯೆ ನಡೆಯುವ ಜೂಜಾಗುತ್ತಿದೆ" – Human History is becoming a gambling between the teacher and the traitor ಎಂದಿದ್ದಾನೆ. ಈ ಮಾತು ಅಂದಿಗಿಂತ ಹೆಚ್ಚು ಅನ್ವಯವಾಗುವ ಇಂದು, ಧಾರ್ಮಿಕ ಸಂಕಲ್ಪದ ಬೋಧಕರ ಈ ವೇದಿಕೆಯಲ್ಲಿ ಧಾರ್ಮಿಕವಾಗಿ ದ್ಯುತಿಗೆಟ್ಟಿರುವ, ಸಾಂಸ್ಕೃತಿಕವಾಗಿ ಸೊರಗುತ್ತಿರುವ ಮತ್ತು ನೈತಿಕವಾಗಿ ನಿಘಾತಗೊಂಡಿರುವ ಇಂದಿನ ಸಮುದಾಯದ ಭಾಗವಾಗಿರುವ ನನ್ನಂಥವನು ಪ್ರಾಸ್ತಾವಿಕವಾಗಿ ಏನು ಹೇಳುವುದು ?

ಆದರೂ ಸಮಾವೇಶದ ಶಿಷ್ಟಾಚಾರಕ್ಕಾಗಿ ಎರಡು ಮಾತು. ಇದುವರೆಗೆ ಇಂತಹ ಧಾರ್ಮಿಕ ಸಮಾವೇಶಗಳು ವಿಶ್ವಾದ್ಯಂತ ಸಾವಿರ ಸಾವಿರ ಸಂಖ್ಯೆಯಲ್ಲಿ ನಡೆದಿರಬಹುದು. 'ರಾಷ್ಟ್ರೀಯ ಭಾವೈಕ್ಯತೆ' ಎಂಬ ಶಬ್ದವಂತೂ ಬಳಸಿ ಬಳಸಿ ಸವೆದು ಹೋಗಿರಬಹುದು. ಆದರೆ ಅದನ್ನು ಸಾಧಿಸುವ ಬದಲಾಗಿ ಬಾಧಿಸುವ ಕೆಲಸವೇ ಹೆಚ್ಚಾಗಿ ನಡೆದಿದೆ. ಈ ಹಿನ್ನೆಲೆಯಲ್ಲಿ ಇಂದು ಸೇರಿರುವ




ಗಣ್ಯರಿಂದ ಸಿದ್ಧಗಂಗಾ ವಿಶೇಷ ಸಂಚಿಕೆ, ಜ್ಞಾನಜ್ಯೋತಿ ಸಿ.ಡಿ., ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹಾಗೂ "ಭುವನದ ಭಾಗ್ಯ" ಕೃತಿಗಳ ಲೋಕಾರ್ಪಣೆ

ಧರ್ಮಗುರುಗಳ ಸಮಾವೇಶ ಕೇವಲ ಬೋಧನೆಯ ಸಮಾವೇಶವಾಗದೆ ಸಾಧನೆಯ ಸಮಾವೇಶವಾಗಬೇಕೆಂದು ಆಶಿಸುತ್ತೇನೆ.

ನಮ್ಮ ದೇಶವನ್ನೀಗ ನವಗ್ರಹಗಳು ಕಾಡುತ್ತಿವೆ. ಈ ನವಗ್ರಹಗಳು ಶಾಸ್ತ್ರ-ಪುರಾಣಗಳಲ್ಲಿ ಪ್ರಸ್ತಾಪಗೊಂಡಿರುವ ನವಗ್ರಹಗಳಲ್ಲ. ನಮ್ಮ ವಿಲಕ್ಷಣ ಬುದ್ಧಿವಂತಿಕೆಯಿಂದ ನಾವೇ ಸೃಷ್ಟಿಸಿಕೊಂಡಿರುವ ನವಗ್ರಹಗಳು. ಅವುಗಳೆಂದರೆ –

೧. ವ್ಯಕ್ತಿ ಚಾರಿತ್ರ್ಯದ ದಾರಿದ್ರ್ಯ
(Indigence of personal character)
೨. ಜಾಗತೀಕರಣದ ಜೂಜು
(Gambling of Globalisation)
೩. ಹಣ ಮತ್ತು ಅಧಿಕಾರದ ಹುಚ್ಚು
(Madness after money and power)
೪. ಬುದ್ಧಿಜೀವಿಗಳ ಮೂರ್ಖತನ
(Stupidity of intellectuals)
೫. ನೈಸರ್ಗಿಕ ಸಂಪತ್ತಿನ ದುರ್ಬಳಕೆ
(Misuse of natural resources)
೬. ಮತಾಂಧತೆಯ ಮತಿಭ್ರಮಣತೆ
(Fanaticism of Religion)
೭. ರಾಜಕೀಯ ವ್ಯವಸ್ಥೆಯ ಅನಾಯಕತ್ವ
(Anarchy in political system)
೮. ಧರ್ಮದ ಅಪವ್ಯಾಖ್ಯಾನ
(Misinterpretation of religion)
೯. ಆಧ್ಯಾತ್ಮಕತೆಯ ಅಭಾವ
(Lack of spirituality)

ಈ ಅನಿಷ್ಟಗಳ ಹಾವಳಿಯಲ್ಲಿ ಭಾವೈಕ್ಯತೆ ಎಂಬುದು ಬರಿಯ ಭ್ರಮೆಯಾಗಿಬಿಟ್ಟಿದೆ. ಈ ಅನಿಷ್ಟಗಳಿಂದಾಗಿ ನಮ್ಮ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗಳಲ್ಲಿ ಸ್ವಾರ್ಥದ ಸಿಕ್ಕು, ಸ್ಥಾನದ ಸೊಕ್ಕು, ಹಮ್ಮಿನ ಹಠ, ಆಸೆಯ ಪಾಚಿ, ಕೀರ್ತಿಯ ಹುಚ್ಚು, ಭಯೋತ್ಪಾದನೆ, ಭ್ರಷ್ಟಾಚಾರ – ಇಂತಹ ಅವಗುಣಗಳೆಲ್ಲ ತುಂಬಿಕೊಂಡುಬಿಟ್ಟಿವೆ; ಜೀವನ ಸಂಸ್ಕೃತಿ ಜರ್ಝರಿತವಾಗಿದೆ.

ನಾವು ನಾಗರಿಕತೆಯ ಬೆನ್ನು ಹತ್ತಿದ್ದೇವೆ. ಅದನ್ನು ಹೇಗಾದರೂ ಪಡೆಯಬಹುದು. ಸಾಲ ಬೇಕಾದರೂ ತರಬಹುದು. ಆದರೆ ಸಂಸ್ಕೃತಿ ಹಾಗಲ್ಲ. ನಾಗರಿಕತೆ ಕೇವಲ ಅನುಕರಣೆ; ಸಂಸ್ಕೃತಿ ಪೂರ್ಣ ಸಾಧನೆ. ನಾವೀಗ ಚಿಂತಿಸಬೇಕಾಗಿರುವ ಭಾವೈಕ್ಯತೆಯ



ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಪೂಜ್ಯ ಡಾ. ವೀರೇಂದ್ರ ಹೆಗಡೆ ಅವರು ಸಿದ್ಧಗಂಗಾ ವಿಶೇಷ ಸಂಚಿಕೆ ಬಿಡುಗಡೆ ಮಾಡಿ ಮಾತನಾಡುತ್ತಿರುವುದು



ಪೂಜ್ಯ ಡಾ. ವೀರೇಂದ್ರ ಹೆಗಡೆ ಅವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಗೌರವ ಸಮರ್ಪಣೆ



ಹಿರಿಯ ಸಂಶೋಧಕ ಡಾ. ಎಂ.ಎಂ. ಕಲಬುರ್ಗಿ ಅವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಗೌರವ ಸಮರ್ಪಣೆ









ಪೂಜ್ಯ ಶ್ರೀಗಳವರಿಂದ ವೈದ್ಯಕೀಯ ಶಿಕ್ಷಣ ಸಚಿವರಾದ ಶ್ರೀ ರಾಮಚಂದ್ರೇಗೌಡ ಅವರಿಗೆ ಆಶೀರ್ವಾದ




ಪೂಜ್ಯ ಶ್ರೀಗಳವರಿಂದ ಕರ್ನಾಟಕ ಯೋಜನಾ ಮಂಡಳಿಯ ಉಪಾಧ್ಯಕ್ಷರಾದ ಶ್ರೀ ಡಿ.ಹೆಚ್. ಶಂಕರಮೂರ್ತಿ ಅವರಿಗೆ ಆಶೀರ್ವಾದ




ಹಿರಿಯ ಸಂಶೋಧಕರಾದ ಡಾ. ಎಂ. ಚಿದಾನಂದಮೂರ್ತಿ ಅವರಿಗೆ ಪೂಜ್ಯ ಶ್ರೀಗಳವರಿಂದ ಆಶೀರ್ವಾದ

ಮೊದಲ ಅಗತ್ಯವೇ ಸಂಸ್ಕೃತಿ. ನಾಗರಿಕತೆಗೆ ಇರುವ ಮೌಲ್ಯ ಮಾರುಕಟ್ಟೆಯದು; ಆದರೆ ಸಂಸ್ಕೃತಿ ಮೌಲ್ಯ ಅಂತರಂಗ ಸಾಕ್ಷಿಯದು.

ನಮ್ಮ ಬದುಕು ಬಹುಮಟ್ಟಿಗೆ ಬಾಹ್ಯ ಸನ್ನಿವೇಶದ ಸುಳಿಗೆ ಸಿಲುಕಿ ಅನೇಕ ವೇಳೆ ದರಿದ್ರವಾಗುತ್ತದೆ, ದಿಗ್ಭ್ರಮೆಗೊಳ್ಳುತ್ತದೆ; ದುರ್ಭರವಾಗುತ್ತದೆ. ನಡೆಯುವ ಹಾದಿಯಲ್ಲಿ ನಿರಾಸೆಯ ಕತ್ತಲು ಕವಿಯುತ್ತದೆ. ಅಂತಹ ಸಂದಿಗ್ಧ ಸಂದರ್ಭದಲ್ಲಿ ನಮ್ಮ ಧರ್ಮಗುರುಗಳು ದಾರಿ ದೀಪವಾಗಬೇಕು, ನೇರ ಬೆಳಕಾಗಬೇಕು, ನಮ್ಮಲ್ಲಿ ಜೀವನ ವಿಶ್ವಾಸ ಮೂಡಿಸಬೇಕು. ರಾಷ್ಟ್ರೀಯ ಭಾವೈಕ್ಯತೆಯ ಸಾಧನೆ ಎಂದರೆ ಮತ್ತೇನೂ ಅಲ್ಲ; ರಾಷ್ಟ್ರದ ಜನತೆಯ ನಡೆ-ನುಡಿಗಳಲ್ಲಿ ಸಮನ್ವಯ ಸಾಧಿಸುವುದು.

ಈ ಸಮನ್ವಯದ ಪ್ರಜ್ಞೆಯಿಲ್ಲದೆ ನಾವು ಮಾನವರಾಗಿಯೂ ಮನುಷ್ಯ ಲಕ್ಷಣ ಬಿಟ್ಟು ಮೃಗಲಕ್ಷಣ ಮೈಗೂಡಿಸಿಕೊಂಡಿದ್ದೇವೆ. ಹಾಗಾಗಿ ಈ ಮಾನವ ಗ್ರಹ 'Animal Planet' ಆಗಿದೆ. ಸಹಸ್ರಾರು ವರ್ಷಗಳಿಂದ ನಾಗರಿಕರಾಗಿ ಬೆಳೆದಿದ್ದೇವೆ ಎಂದು ಹೇಳುತ್ತಿದ್ದರೂ ನಾವೀಗ ಭಯ ಮತ್ತು ಸಂಶಯಗಳ ಸುಳಿಯಲ್ಲಿ ಸಿಕ್ಕಿಕೊಂಡಿದ್ದೇವೆ. ನಾಗರಿಕರೆನ್ನುವ ನಾವು ಭದ್ರವಾದ ಕಟ್ಟಡಗಳನ್ನು ಕಟ್ಟಿಕೊಂಡು ಬಾಗಿಲಿಗೆ ಬೋಲ್ಟು ಹಾಕಿ ಮಲಗಿದ್ದರೂ ನಿಶ್ಚಿಂತೆಯ ನಿದ್ದೆಯಿಲ್ಲ. ಇದಕ್ಕೆ ಏನು ಕಾರಣ ? ನಮ್ಮಲ್ಲೇ ನಮಗೆ ವಿಶ್ವಾಸವಿಲ್ಲ; ಇನ್ನೊಬ್ಬರನ್ನು ನಂಬುದಿಲ್ಲ.

ಇಂದು ದೇಶದ ಎಲ್ಲ ಕಡೆ ಅಹಂಕಾರ ಮತ್ತು ಹಠಗಳು ಭೀಕರ ನೃತ್ಯ ನಡೆಸಿವೆ. ಧರ್ಮಗುರುಗಳು ಈ ಅಹಂಕಾರ ಅಡಗಿಸಿ ಶಾಂತಿ-ಸಹನೆಗಳನ್ನು ಜನಸಮುದಾಯದಲ್ಲಿ ಅರಳಿಸಬೇಕಾಗಿದೆ. ಇದಕ್ಕಾಗಿ ನಮ್ಮ ಧರ್ಮಗುರುಗಳು **'ಧರ್ಮಯುದ್ಧ'** ಸಾರಬೇಕಾಗಿದೆ. 'ಧರ್ಮಯುದ್ಧ' ಎನ್ನುವ ಹೆಸರಿನಲ್ಲಿ ಕೆಲವು ಧರ್ಮಾಂಧರು ದೇಶದ ನೆಮ್ಮದಿಯನ್ನೇ ಕೆಡಿಸಿರುವುದುಂಟು. ಆದರೆ ನಾನು ಹೇಳುವ 'ಧರ್ಮಯುದ್ಧ' ಹಿಂಸೆಯದಲ್ಲ. ಈ ಯುದ್ಧಕ್ಕೆ ಬೇಕಾಗಿರುವುದು ರಕ್ತ ಹರಿಸುವ ಶಸ್ತ್ರಾಸ್ತ್ರವಲ್ಲ; ಕಾರುಣ್ಯದ ಸೌಹಾರ್ದಾಸ್ತ್ರ. ಇಲ್ಲಿ ಮದ್ದು ಗುಂಡುಗಳ ಗದ್ದಲವಿಲ್ಲ; ಸಮುದಾಯದ ನಡೆ-ನುಡಿಗಳ ಶುದ್ಧಿಯಷ್ಟೆ. ಈ ಧರ್ಮಯುದ್ಧದ ಆಶಯ ವ್ಯಕ್ತಿಚಾರಿತ್ರ್ಯ, ಸಮಾಜ ಸ್ವಾಸ್ಥ್ಯ ಮತ್ತು ರಾಷ್ಟ್ರ ಸಮಗ್ರತೆ.

ಯಾವುದೇ ದೇಶದ ಘನತೆ ಗೌರವಗಳಿಗೆ ಈ ದೇಶದ ಧನ ಸಂಪತ್ತು ಅಳತೆಗೋಲಾಗಬಾರದು; ಜನ ಸಂಸ್ಕೃತಿ ಅಳತೆಗೋಲಾಗಬೇಕು. ಅಂತೇ ಭಾರತದಲ್ಲಿ ಸಹಸ್ರಾರು ವರ್ಷಗಳಿಂದ ವಿಕೃತ

ಬಾಹ್ಯಶಕ್ತಿಗಳು ತಂದೊಡ್ಡಿದ ಅಘಾತಗಳ ಮಧ್ಯೆಯೂ ನಮ್ಮ ಸಂಸ್ಕೃತಿಯನ್ನು ಸಂರಕ್ಷಿಸಿಕೊಂಡು ಬರುವಲ್ಲಿ ಈ ದೇಶದ ಸನ್ಯಾಸಿಗಳು, ಧರ್ಮಗುರುಗಳು, ದಾರ್ಶನಿಕರು ವಹಿಸಿರುವ ಪಾತ್ರವನ್ನು ನಾವು ಮರೆಯುವಂತಿಲ್ಲ.

ಆದರೆ, ಈಗ ಜಾಗತೀಕರಣ ಮತ್ತು ಆಧುನೀಕರಣದ ಬಿರುಗಾಳಿಯಿಂದ ಭಾರತೀಯ ಸಾಂಸ್ಕೃತಿಕ ಮೌಲ್ಯಗಳಿಗೆ ಹಿಂದೆಂದೂ ಆಗದಷ್ಟು ಭಾರಿ ಪ್ರಮಾಣದ ಆತಂಕವುಂಟಾಗಿದೆ. ರಾಷ್ಟ್ರೀಯ ಭಾವೈಕ್ಯತೆಯ ಸಾಧನೆಗೆ ಅಡ್ಡವಾಗಿ ದೊಡ್ಡ ದೊಡ್ಡ ಗೋಡೆಗಳೇ ನಿರ್ಮಾಣವಾಗುತ್ತಿವೆ.

ನಾಲ್ಕು ಶತಮಾನಗಳ ಹಿಂದಿದ್ದ ಕನಕದಾಸರು ಹಾಡಿರುವ ಒಂದು ಕೀರ್ತನೆಯಲ್ಲಿ **"ಏಕೆ ನಡುಗಿದೆ ತಾಯೆ ಭೂಮಿ ನಡುರಾತ್ರಿಯೊಳು"** ಎಂದು ಕೇಳಿದ್ದಾರೆ. ನಿಜ, ಆಗೇನು, ಈಗಲೂ ನಮ್ಮ ಭೂಮಿ ನಡುಗುತ್ತಿದೆ. ಭಯೋತ್ಪಾದಕರ ಭೀಕರ ಕೃತ್ಯಗಳಿಂದ ನಡುಗುತ್ತಿದೆ. ರಾಜಕೀಯ ಭ್ರಷ್ಟ ವ್ಯವಸ್ಥೆಯಿಂದ ನಡುಗುತ್ತಿದೆ. ಕೆಲವು ಧರ್ಮಗುರುಗಳ ಲೌಕಿಕ ಜೀವನ ಕಂಡು ನಡುಗುತ್ತಿದೆ. ಮತಾಂಧರ ಮತಿಹೀನತೆಯನ್ನು ಕಂಡು ನಡುಗುತ್ತಿದೆ. ಶಿಕ್ಷಣ ಕ್ಷೇತ್ರದ ಶಿಥಿಲತೆಯನ್ನು ಕಂಡು ನಡುಗುತ್ತಿದೆ. ಮೈಮುರಿದು ದುಡಿಯಲಾದ ಜಡ ಜೀವಿಗಳ ಭಾರದಿಂದ ನಡುಗುತ್ತಿದೆ. ಅಹಂಕಾರದ ಅಮಲಿನಲ್ಲಿರುವ ಅಧಿಕಾರಸ್ಥರನ್ನು ಕಂಡು ನಡುಗುತ್ತಿದೆ. ಕರ್ತವ್ಯಭ್ರಷ್ಟ ಕಚೇರಿ ಸಿಬ್ಬಂದಿಗೆ ಹೆದರಿ ನಡುಗುತ್ತಿದೆ. ಸಾಹಿತಿ-ಕಲಾವಿದರ ಇಬ್ಬಂದಿತನಕ್ಕೆ ನಡುಗುತ್ತಿದೆ. ಶ್ರಮಜೀವಿ ರೈತರ ಆತ್ಮಹತ್ಯೆಗೆ ನೊಂದು ನಡುಗುತ್ತಿದೆ. ಸಮಾಜ ಮುಖ್ಯರ ಶೀಲಚಾರಿತ್ರ್ಯಗಳ ದಾರಿದ್ರ್ಯ ಕಂಡು ನಡುಗುತ್ತಿದೆ. ತೋರಿಕೆಯ ಸಭ್ಯರಿಂದ, ಹಾರಿಕೆಯ ಹೊಣೆಗಾರರಿಂದ ನಮ್ಮ ಭೂಮಿ ತತ್ತರಿಸಿ ನಡುಗುತ್ತಿದೆ.

ಇಂತಹ ನಡುಗುವ ನೆಲದ ಮೇಲೆ ನೆಮ್ಮದಿ ಹೇಗೆ ಸಾಧ್ಯವಾದೀತು ? ಈ ಪ್ರಶ್ನೆ ನಮ್ಮನ್ನು ಕಾಡಬೇಕು. ಮೊದಲು ಈ ನಡುಕ ನಿಲ್ಲಬೇಕು. ಅದು ನಿಲ್ಲಬೇಕಾದರೆ ನಾನು ಪಟ್ಟಿ ಮಾಡಿದ ಅನಿಷ್ಟಗಳು ಅಡಗಬೇಕು. ಇದಕ್ಕೆ ಇರುವ ಏಕ ಮಾತ್ರ ಮಾರ್ಗವೆಂದರೆ ಜನಜಾಗೃತಿ. ಈ ಕಾರ್ಯ ನಮ್ಮ ಧರ್ಮ ಗುರುಗಳಿಂದ ಮಾತ್ರ ಸಾಧ್ಯ ಎಂದು ನಾನು ತಿಳಿದಿದ್ದೇನೆ. ಧರ್ಮ ಗುರುಗಳು ಅದಕ್ಕಾಗಿಯೇ ಸಂಕಲ್ಪಮಾಡಿ ಅಲ್ಲಮಪ್ರಭುವಿನಂತೆ, ವಿವೇಕಾನಂದರಂತೆ, ಪರಿವ್ರಾಜಕರಾಗಿ ಜನರ ಬಳಿಗೇ ಹೋಗುವ ಜಂಗಮರಾಗಬೇಕು. ಇದಕ್ಕೆ ಈಗ ನಾವು ಶತಮಾನೋತ್ಸವ ಆಚರಿಸುತ್ತಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೇ ಜೀವಂತ ನಿದರ್ಶನಕ್ಕಿದ್ದಾರೆ.




ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಅವರಿಗೆ ಪೂಜ್ಯ ಶ್ರೀಗಳವರಿಂದ ಆಶೀರ್ವಾದ



ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಡಾ. ಸಾಶಿಮರುಳಯ್ಯ ಅವರಿಗೆ ಪೂಜ್ಯ ಶ್ರೀಗಳವರಿಂದ ಆಶೀರ್ವಾದ




ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಪ್ರೊ. ಎಸ್. ಬಸವರಾಧ್ಯ ಅವರಿಗೆ ಪೂಜ್ಯ ಶ್ರೀಗಳವರಿಂದ ಆಶೀರ್ವಾದ








ಬೇಲಿಮಠದ ಪೂಜ್ಯ ಶ್ರೀ ಶಿವರುದ್ರ ಮಹಾಸ್ವಾಮಿಗಳವರಿಗೆ ಪೂಜ್ಯ ಶ್ರೀಗಳವರಿಂದ ಗೌರವ ಸಮರ್ಪಣೆ



ಪೂಜ್ಯ ಶ್ರೀಗಳವರಿಂದ ಶ್ರೀ ಗವಿ ಸಿದ್ಧೇಶ್ವರ ಮಹಾಸ್ವಾಮಿಗಳವರಿಗೆ ಗೌರವ ಸಮರ್ಪಣೆ



ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು

ಹೀಗೆ ಇಡೀ ಸಮುದಾಯವನ್ನು ಭಾವೈಕ್ಯತೆಯ ಭದ್ರ ಬೆಸುಗೆಯಿಂದ ರಾಷ್ಟ್ರ ಸೇವೆಗೆ ಸನ್ನದ್ಧಗೊಳಿಸಲು ಬಹುಶಃ ಧರ್ಮ ಗುರುಗಳಿಗೆ ಇರುವಷ್ಟು ಅವಕಾಶ ಬೇರಾರಿಗೂ ಇಲ್ಲ. ಏಕೆಂದರೆ, ಅವರಿಗೆ ಯಾರದ್ದೂ ಹಂಗಿಲ್ಲ. ಅವರು ಲೋಕಬಂಧವಿಮುಕ್ತರು. ಹಾಗಾಗಿ ಅವರ ಮಾತುಗಳು ಮಂತ್ರವಾಗಬೇಕು. ಒಂದು ವೇಳೆ ಧರ್ಮಗುರುಗಳು ಈಗ ಉದಾಸೀನ ತಾಳಿದರೆ ಇಡೀ ಧಾರ್ಮಿಕ ವ್ಯವಸ್ಥೆಯೇ ಉದಾಸೀನಕ್ಕೆ ಒಳಗಾಗಿಬಿಡಬಹುದು.

ಧರ್ಮದ ಹೆಸರಿನಲ್ಲಿ ಇಂದು ನಡೆಯುತ್ತಿರುವ ಹಿಂಸೆ, ದ್ವೇಷ ಮತ್ತು ಕ್ರೌರ್ಯಗಳ ಸ್ಥಾನದಲ್ಲಿ ಅಹಿಂಸೆ, ಪ್ರೇಮ ಮತ್ತು ಕರುಣೆಗಳನ್ನು ಬಿತ್ತಿ ಬೆಳೆಯಬೇಕಾಗಿದೆ. ಅನ್ಯರ ಬೆವರಿನಲ್ಲಿ ಭೋಗದ ಅರಮನೆ ಕಟ್ಟಿಕೊಂಡು ಮೋಜಿನಿಂದ ಮೆರೆಯುವ ಮತಾಂಧರಿಗೆ ಶ್ರಮದ ದುಡಿಮೆಯ ಬುದ್ಧಿ ಕಲಿಸಬೇಕಾಗಿದೆ. ನಿಜವಾದ ಧರ್ಮ ಇದಕ್ಕೆ ಬಳಕೆಯಾಗಬೇಕು.

'ಧರ್ಮ' ಎಂಬ ಶಬ್ದವನ್ನು ವಿಶ್ವದ ಅನೇಕ ದಾರ್ಶನಿಕರು ತಮ್ಮದೇ ಆದ ರೀತಿಯಲ್ಲಿ ಅರ್ಥೈಸಿರಬಹುದು. ಆದರೆ ಸ್ವಾಮಿ ವಿವೇಕಾನಂದರು, ೧೨ನೆಯ ಶತಮಾನದ ಶರಣರು ಹೇಳಿದ ಧರ್ಮ ಇಂದಿನ ಅಗತ್ಯವಾಗಿದೆ. ಅವರ ದೃಷ್ಟಿಯಲ್ಲಿ ಧರ್ಮದ ಸೂತ್ರವೇ ಸಂಘಟಿತ ಸ್ನೇಹ. ಅವರು ಹೇಳುವ ಧರ್ಮ ಹೊರಗಿನ ಕರ್ಮಾಚರಣೆಗಳಲ್ಲ; ಆಂತರಿಕ ಅನ್ವೇಷಣೆ. ಒಳವಲಯದ ಸಂಶಯ-ಅಪನಂಬಿಕೆಗಳನ್ನು ಪತ್ತೆ ಹಚ್ಚಿ ಕಿತ್ತು ಹಾಕಿ ಪರಿಶುದ್ಧ ಅಂತಃಕರಣವನ್ನು ಬೆಳಸಬೇಕೆಂಬುದು. ಆಗಲೇ ನಾವು ಭಾವೈಕ್ಯತೆಯ ಬೆಳಕನ್ನು ಕಾಣಲು ಸಾಧ್ಯ. ಧರ್ಮ ಎಂದರೆ ಸ್ವಾತಂತ್ರ್ಯ-Liberty, ಧರ್ಮ ಎಂದರೆ ನ್ಯಾಯ-Justice, ಧರ್ಮ ಎಂದರೆ ಸತ್ಯ-Truth, ಧರ್ಮ ಎಂದರೆ ಪಾವಿತ್ರ್ಯತೆ-Sanctity, - ಇದು ನಮ್ಮ ರಾಷ್ಟ್ರಧರ್ಮವಾಗಬೇಕು. 'ರಾಷ್ಟ್ರೀಯ ಭಾವೈಕ್ಯತೆ' ಎಂದರೆ ಈ ರಾಷ್ಟ್ರಧರ್ಮದ ಬದ್ಧತೆ. ಅಲ್ಲಿ ವಿಚಾರಕ್ಕೂ, ವಿಧಾನಕ್ಕೂ ವ್ಯತ್ಯಾಸವಿಲ್ಲ.

ರಾಜಕೀಯ ವ್ಯವಸ್ಥೆಗೆ ಸಂವಿಧಾನವಿದೆ. ಹಾಗೆಯೇ ಸಾಮಾಜಿಕ ವ್ಯವಸ್ಥೆಗೆ ನೀತಿ ಸಂಹಿತೆ ಇರಬೇಕು. ಇಂದಿನ ಪಲ್ಲಟದ ಪರಿಸ್ಥಿತಿಯಲ್ಲಿ ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯೂ ಭಾವೈಕ್ಯತೆಯಿಂದ ರಾಷ್ಟ್ರದ ಅಖಂಡತೆಯನ್ನು ರಕ್ಷಿಸಬೇಕು. ಕೊನೆಯದಾಗಿ ಸರ್ದಾರ ವಲ್ಲಭಬಾಯಿ ಪಟೇಲರು ಹೇಳಿರುವ ಮಾತುಗಳೊಂದಿಗೆ ನನ್ನ ಪ್ರಸ್ತಾವನೆಯ ನುಡಿಗಳನ್ನು ಮುಗಿಸುತ್ತೇನೆ.

"Let us not forget the stupendous responsibilities and obligations which freedom

ಭಾರತದ ಮಾಜಿ ಉಪ ಪ್ರಧಾನಿಗಳು, ಲೋಕಸಭಾ ವಿರೋಧ ಪಕ್ಷದ ನಾಯಕರು ಆದ ಶ್ರೀ ಎಲ್.ಕೆ. ಅಡ್ವಾನಿ ಅವರಿಂದ ಧಾರ್ಮಿಕ ಸಮಾವೇಶ ಉದ್ಘಾಟನೆ

has brought in its wake. Our primary duty is to guard our freedom against dangers from within and without'' – ಎಂದರೆ "ಸ್ವಾತಂತ್ರ್ಯ ನಮ್ಮ ಮೇಲೆ ಹೊರಿಸಿರುವ ಹೊಣೆಗಾರಿಕೆ ಮತ್ತು ಕರ್ತವ್ಯಗಳನ್ನು ಮರೆಯದಿರೋಣ. ನಮ್ಮ ಪ್ರಥಮ ಕರ್ತವ್ಯವೆಂದರೆ ಒಳ-ಹೊರಗಿನ ಎಲ್ಲ ಅಪಾಯಗಳ ವಿರುದ್ಧ ನಮ್ಮ ಸ್ವಾತಂತ್ರ್ಯವನ್ನು ರಕ್ಷಿಸುವುದು."

ಈ ಸ್ವಾತಂತ್ರ್ಯ ರಕ್ಷಣೆಗೆ ಅತ್ಯಂತ ಅಗತ್ಯವಾದ ರಾಷ್ಟ್ರೀಯ ಭಾವೈಕ್ಯತೆಯ ಸ್ಪಷ್ಟ ಸಂದೇಶ ಈ ಧಾರ್ಮಿಕ ಸಮಾವೇಶದಿಂದ ಮೂಡಿಬರಲೆಂದು ಆಶಿಸುತ್ತೇನೆ.

ಸರ್ವೋಚ್ಛ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರು ಹಾಗೂ ಶತಮಾನೋತ್ಸವ ಸಮಿತಿಯ ಗೌರವ ಅಧ್ಯಕ್ಷರೂ ಆದ ನ್ಯಾಯಮೂರ್ತಿ ಡಾ. ಶಿವರಾಜ ವಿ. ಪಾಟೀಲ ಅವರು, ಡಾ. ಎಂ.ಜಿ. ನಾಗರಾಜ್ ಅವರು ಬರೆದ 'ಸಿದ್ಧಗಂಗಾ ಕ್ಷೇತ್ರ' ಕೃತಿಯನ್ನು ಲೋಕಾರ್ಪಣೆ ಮಾಡಿ 'ಇದೊಂದು ಶ್ರೀಮಠದ ಇತಿಹಾಸವನ್ನೊಳಗೊಂಡ ಮಹತ್ವದ ಕೃತಿ. ಲೇಖಕರ ಸಂಶೋಧನೆ, ಪರಿಶ್ರಮ ಈ ಕೃತಿಯಲ್ಲಿ ಸಾಕಾರಗೊಂಡಿದೆ' ಎಂದರು.

ಮಾಜಿ ಕೇಂದ್ರ ಸಚಿವರು ಹಾಗೂ ಲೋಕಸಭಾ ಸದಸ್ಯರೂ ಆದ ಶ್ರೀ ಅನಂತಕುಮಾರ್ ಅವರು ಶ್ರೀ ಕವಿತಾಕೃಷ್ಣ ಅವರು ರಚಿಸಿದ 'ಆಧ್ಯಾತ್ಮ ಸೂರ್ಯ' ಕೃತಿಯನ್ನು ಬಿಡುಗಡೆ ಮಾಡಿ ಪೂಜ್ಯ ಶ್ರೀಗಳವರು ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ಮುಕ್ತ ಮನಸ್ಸಿನಿಂದ ಶ್ಲಾಘಿಸಿದರು. ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರ ಆಡಳಿತವನ್ನು ಪ್ರಶಂಸಿಸಿದ ಶ್ರೀ ಅನಂತಕುಮಾರ್ ಅವರು ಮೂರು ವರ್ಷಗಳಿಂದ ಜನಪರವಾದ ಬಜೆಟ್ ನೀಡುವುದರ ಮೂಲಕ ಹ್ಯಾಟ್ರಿಕ್ ಹೀರೋ ಆಗಿದ್ದಾರೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಮಾಜಿ ಉಪ ಮುಖ್ಯಮಂತ್ರಿಗಳಾದ ಶ್ರೀ ಸಿದ್ಧರಾಮಯ್ಯನವರು ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಬರೆದ 'ಶ್ರೀ ಗುರು ಕರುಣ ತ್ರಿವಿಧಿ' ಕೃತಿಯನ್ನು ಬಿಡುಗಡೆ ಮಾಡಿ ಭ್ರಷ್ಟಾಚಾರ ಮತ್ತು ಭಯೋತ್ಪಾದನೆ ಪರಿಹಾರ ಕಂಡುಕೊಳ್ಳಬೇಕಿದ್ದರೆ ಧಾರ್ಮಿಕ ಜಾಗೃತಿಯಾಗಬೇಕು. ಮುಖ್ಯವಾಗಿ ಧರ್ಮಗಳಲ್ಲಿನ ಸಾರವನ್ನು ತಪ್ಪಾಗಿ ಅರ್ಥೈಸಿ ಜನತೆಗೆ ಮುಟ್ಟಿಸುತ್ತಿರುವ ಧರ್ಮಾಂಧರಿಗೆ ತಕ್ಕ ಪಾಠ ಕಲಿಸಬೇಕು ಎಂದು ಕರೆ ನೀಡಿದರು. ಬಸವಣ್ಣನವರು ಪ್ರತಿಪಾದಿಸಿದ ಕಾಯಕ ಮತ್ತು ದಾಸೋಹ ಇವತ್ತಿಗೂ ಪ್ರಸ್ತುತ. ಇವುಗಳನ್ನು ಅಕ್ಷರಶಃ ಆಚರಣೆಗೆ ತಂದಿರುವ ಶ್ರೀಗಳು ಈ ಮೂಲಕ ಸಮಾನತೆ ಮತ್ತು ಸಾಮಾಜಿಕ ನ್ಯಾಯ ಕಲ್ಪನೆಯ ಆರೋಗ್ಯಕರ ಸಮಾಜದ ನಿರ್ಮಾಣದಲ್ಲಿ ತೊಡಗಿದ್ದಾರೆ ಎಂದು ಪ್ರಶಂಸಿಸಿದರು.





ಶ್ರೀ ಗೊ.ರು. ಚನ್ನಬಸಪ್ಪನವರಿಂದ ಧಾರ್ಮಿಕ ಸಮಾವೇಶದ ಬಗ್ಗೆ ಪ್ರಾಸ್ತವಿಕ ನುಡಿ

ಶ್ರೀ ಗೊ.ರು.ಚ. ಅವರಿಗೆ ಸನ್ಮಾನ

ಉದ್ಘಾಟನಾ ಭಾಷಣ ಮಾಡುತ್ತಿರುವ ಶ್ರೀ ಎಲ್.ಕೆ. ಅಡ್ವಾನಿ ಅವರು. ಕನ್ನಡಕ್ಕೆ ಭಾಷಾಂತರಿಸುತ್ತಿರುವ ಶ್ರೀ ಅನಂತ್‌ಕುಮಾರ್ ಅವರು

'ಶ್ರೀ ಸಿದ್ಧಗಂಗಾ ಸ್ಪರ್ಧಾತ್ಮಕ ಪರೀಕ್ಷೆಗಳ ಅಧ್ಯಯನ ಕೇಂದ್ರ'ವನ್ನು ಕುರಿತು ಕಿರುಹೊತ್ತಿಗೆಯನ್ನು ವಿಧಾನ ಪರಿಷತ್ ಮುಖ್ಯ ಸಚೇತರಕರಾದ ಡಾ. ಶಿವಯೋಗಿಸ್ವಾಮಿ ಅವರು ಬಿಡುಗಡೆ ಮಾಡಿದರು.

**ಚಿಂತನೆ**

ಮುಂಡರಗಿ ಅನ್ನದಾನೇಶ್ವರ ಮಹಾ ಸಂಸ್ಥಾನ ಮಠದ ಪೂಜ್ಯ ಶ್ರೀ ಶ್ರೀ ಅನ್ನದಾನೇಶ್ವರ ಮಹಾಸ್ವಾಮಿಗಳು 'ಇಂದಿನ ಹಾದಿ ತಪ್ಪಿದ ಸಮಾಜವನ್ನು ಮತ್ತೆ ಸುಸ್ಥಿತಿಗೆ ತರಲು ಧರ್ಮ ಒಂದೇ ಸಾಧನ. ಧರ್ಮವನ್ನು ನಾವು ಗೌರವಿಸಿದರೆ, ಅದು ನಮ್ಮನ್ನು ರಕ್ಷಿಸುತ್ತದೆ' ಎಂದರು.

ತುಮಕೂರು ಶ್ರೀ ರಾಮಕೃಷ್ಣಾಶ್ರಮದ ಪೂಜ್ಯ ಶ್ರೀ ಶ್ರೀ ವೀರೇಶಾನಂದ ಮಹಾಸ್ವಾಮಿ ಮಾತನಾಡಿ 'ದೇಶದುದ್ದಗಲಕ್ಕೂ ಇರುವ ಸಾಧು-ಸಂತರಿಗೆ ಸಿದ್ಧಗಂಗಾ ಶ್ರೀಗಳು ಮಾದರಿಯಾಗಿದ್ದಾರೆ. ಶ್ರೀಗಳು ತಮ್ಮ ಗರಡಿಯಲ್ಲಿ ಸೈನಿಕರೂ, ಅಧಿಕಾರಿಗಳು, ರಾಷ್ಟ್ರಕವಿಗಳನ್ನು ಸೃಷ್ಟಿಸಿದ್ದಾರೆ. ಸಮಾಜವಾದಿಯಾಗಿ ಸುಖ, ಸಾಮರ್ಥ್ಯವನ್ನು ಹಂಚಿದ್ದಾರೆ' ಎಂದರು.

ಹಜ್ ವಕ್ಫ್ ಹಾಗೂ ಅಲ್ಪಸಂಖ್ಯಾತರ ಅಭಿವೃದ್ಧಿ ಸಚಿವರಾದ ಡಾ. ಮಮ್ತಾಜ್ ಅಲೀಖಾನ್ ಅವರು ಮಾತನಾಡಿ 'ಒಂದು ಕಾಲದಲ್ಲಿ ತಪಸ್ವಿಗಳ ದೇಶ ಭಾರತ ಎಂದು ಪ್ರಖ್ಯಾತವಾಗಿದ್ದು ಇಂದು ದೇಶ ಅಧೋಗತಿಯತ್ತ ಸಾಗುತ್ತಿರುವುದಕ್ಕೆ ವಿಷಾದ ವ್ಯಕ್ತಪಡಿಸಿದರು. ಪರಮಪೂಜ್ಯ ಶ್ರೀಗಳು ಕಳೆದ ಎಂಬತ್ತು ವರ್ಷಗಳಿಂದ ಸಾಮಾಜಿಕ ಕ್ರಾಂತಿ ಮಾಡುತ್ತಿದ್ದಾರೆ' ಎಂದು ತಿಳಿಸಿದರು.

**ಸನ್ಮಾನ**

ಇದೇ ಸಂದರ್ಭದಲ್ಲಿ ದೇವನಹಳ್ಳಿ ಜಮೀನ್ದಾರರಾದ ಶ್ರೀ ಅಶ್ವತ್ಥನಾರಾಯಣ, ಶತಮಾನೋತ್ಸವ ಸಮಿತಿಯ ಕಾರ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಮುದ್ದಪ್ಪ, ಚಿಕ್ಕಬಳ್ಳಾಪುರದ ವರ್ತಕರಾದ ಶ್ರೀ ಆರ್. ಪಾಲಾಕ್ಷಪ್ಪ ಅವರನ್ನು ಪರಮಪೂಜ್ಯ ಶ್ರೀಗಳು ಸನ್ಮಾನಿಸಿ ಆಶೀರ್ವದಿಸಿದರು.

ಧಾರ್ಮಿಕ ಸಮಾವೇಶದ ಅಧ್ಯಕ್ಷತೆ ವಹಿಸಿದ್ದ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಮಾತನಾಡಿ ಕಾಯಕಯೋಗಿ ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ಹೆಸರನ್ನು ತುಮಕೂರು ವಿಶ್ವವಿದ್ಯಾನಿಲಯಕ್ಕೆ ಇಡಲಾಗುವುದು. ಮುಂಬರುವ ಅಧಿವೇಶನದಲ್ಲಿ ವಿಶ್ವವಿದ್ಯಾನಿಲಯ ಅಧಿನಿಯಮಕ್ಕೆ ತಿದ್ದುಪಡಿ ತರಲಾಗುವುದು ಎಂದು ಘೋಷಿಸಿದರು.

'ಪರಮಪೂಜ್ಯ ಶ್ರೀ ಶ್ರೀಗಳವರ ಕರ್ಮಭೂಮಿಯಾದ ತುಮಕೂರು ಜಿಲ್ಲೆಗೆ ಎಲ್ಲ ಅಗತ್ಯ ಸೌಕರ್ಯ ಒದಗಿಸಲು ಸಿದ್ಧನಿದ್ದೇನೆ ಅಷ್ಟೇ ಅಲ್ಲ ಶ್ರೀಗಳವರ ಸೇವೆಗೆ ಕೃತಜ್ಞತೆ ಸಲ್ಲಿಸಲು ತುಮಕೂರನ್ನು ಮಹಾನಗರ ಪಾಲಿಕೆಯಾಗಿ ಘೋಷಿಸಿ ಜಿಲ್ಲೆಯ ನೀರಾವರಿ ಯೋಜನೆಗಳಿಗೆ ಅಗತ್ಯವಾದ ಅನುದಾನ ಒದಗಿಸುವ ನಿರ್ಧಾರವನ್ನು ಕೈಗೊಳ್ಳಲಾಗಿದೆ' ಎಂದು ತಿಳಿಸಿದ ಮುಖ್ಯಮಂತ್ರಿಗಳು ಶ್ರೀಗಳವರು ಭಾವೈಕ್ಯತೆಯ ಸಂಕೇತ ಎಂದು ಬಣ್ಣಿಸಿ, ಶ್ರೀ ಕೃಷ್ಣನ *'ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ'* ಎಂಬ ಸೂಕ್ತಿಯಂತೆ ಧರ್ಮ ಸಂರಕ್ಷಣೆಗೆ ಪರಮಪೂಜ್ಯ ಶ್ರೀಗಳವರು ನಮ್ಮೊಂದಿಗಿದ್ದಾರೆ. ಎಲ್ಲರೂ ಶ್ರೀಗಳವರ ದಿವ್ಯ ಸಂದೇಶ ಮತ್ತು ಮೌಲ್ಯಗಳನ್ನು ನಿತ್ಯ ಬದುಕಿನಲ್ಲಿ ಅಳವಡಿಸಿಕೊಳ್ಳುವ ಮೂಲಕ ಅವರಿಗೆ ಕೃತಜ್ಞತೆ ಸಲ್ಲಿಸೋಣ ಎಂದರು.

'ವೇದಿಕೆಯಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಸಚಿವ ಶ್ರೀ ಎಸ್. ಸುರೇಶ್‌ಕುಮಾರ್ ಶಾಸಕರಾದ ಶ್ರೀ ಸುರೇಶ್‌ಗೌಡ, ಶ್ರೀ ಸೊಗಡು ಶಿವಣ್ಣ, ಶ್ರೀ ಬಿ.ಸಿ. ನಾಗೇಶ್, ಸಂಸದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ, ಕೇಂದ್ರ ಮಾಜಿ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್, ಶ್ರೀ ರಾಜಶೇಖರ್‌ಮೂರ್ತಿ, ಶ್ರೀ ವಿ. ಸೋಮಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

**ಯುವ ಜನ ಸಮಾವೇಶ**

ದಿನಾಂಕ ೪ರ ಮಧ್ಯಾಹ್ನ ಆನಂದಾಪುರ ಪೂಜ್ಯ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘ ರಾಜೇಂದ್ರ ಮಹಾಸ್ವಾಮಿಗಳು ಹಾಗೂ ಕನಕಪುರ ಶ್ರೀ ದೇಗುಲಮಠದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಯುವಜನ ಸಮಾವೇಶ ನಡೆಯಿತು. ವಿಧಾನ ಸಭಾಧ್ಯಕ್ಷರಾದ ಶ್ರೀ ಜಗದೀಶಶೆಟ್ಟರ್ ಅವರು ಸಮಾವೇಶವನ್ನು ಉದ್ಘಾಟಿಸಿ "ರಾಜ್ಯ ಸರ್ಕಾರ ಜಾರಿಗೆ ತಂದಿರುವ ಬಿಸಿಯೂಟ ಯೋಜನೆಗೆ ಪರಮಪೂಜ್ಯ ಶ್ರೀಗಳವರು ಕಳೆದ ಎಂಬತ್ತು ವರ್ಷಗಳಿಂದ ನಡೆಸಿಕೊಂಡು ಬಂದಿರುವ ದಾಸೋಹವೇ ಪ್ರೇರಣೆ" ಎಂದು ಪ್ರಶಂಸಿಸಿದರು.

ಅವರು ತಮ್ಮ ಭಾಷಣದಲ್ಲಿ "ರಾಜಕೀಯ ವೇದಿಕೆ ಮುಖಾಂತರ ಯುವಕರು ಸಮಾಜದ ಅಭಿವೃದ್ಧಿಗೆ ಮುಂದಾಗಬೇಕು" ಎಂದು ಕರೆ ನೀಡಿದರು. ಬಲಿಷ್ಠ ಭಾರತ ನಿರ್ಮಾಣಕ್ಕೆ ಯುವ ಜನತೆ ನಿಸ್ವಾರ್ಥದಿಂದ 'ಅರ್ಪಣಾ ಮನೋಭಾವದಿಂದ ತಮ್ಮನ್ನು ತೊಡಗಿಸಿಕೊಳ್ಳಬೇಕು. ಸಾರ್ವಜನಿಕ ಸೇವೆ ಸರ್ಕಾರದ ಕೆಲಸ ಮಾತ್ರವಲ್ಲ, ಎಲ್ಲರೂ ಮುಕ್ತ ಮನಸ್ಥಿತಿ

ಶ್ರೀ ಎಲ್.ಕೆ. ಅಡ್ವಾನಿ ಅವರಿಂದ ಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ

ಪೂಜ್ಯ ಶ್ರೀ ಶ್ರೀಗಳವರಿಂದ ಶ್ರೀ ಎಲ್.ಕೆ. ಅಡ್ವಾನಿ ಅವರಿಗೆ ಆಶೀರ್ವಾದ

ಶ್ರೀ ವಿ. ಸೋಮಣ್ಣ ಅವರಿಂದ ಶ್ರೀ ಅನಂತ್‌ಕುಮಾರ್ ಅವರಿಗೆ ಸನ್ಮಾನ





ಸೇವಾ ಭಾವನೆಯಿಂದ ತೊಡಗಿಸಿಕೊಂಡಾಗ ದೇಶದ ಅಭಿವೃದ್ಧಿ ಸಾಧ್ಯ. ಇತ್ತೀಚಿನ ದಿನಗಳಲ್ಲಿ ಪಬ್ ಸಂಸ್ಕೃತಿ ಹೆಚ್ಚಾಗುತ್ತಿದೆ. ಇದೊಂದು ಸಾಮಾಜಿಕ ಪಿಡುಗಾಗಿದೆ. ಇದನ್ನು ನಿಯಂತ್ರಿಸಲು ಸರ್ಕಾರದ ಜೊತೆಗೆ ಯುವ ಜನತೆಯೂ ಕೈ ಜೋಡಿಸಬೇಕು" ಎಂದು ಕರೆ ನೀಡಿದರು. 'ದೇಶ ಅಭಿವೃದ್ಧಿಯಾಗಬೇಕಾದರೆ ಯುವಶಕ್ತಿ ಸದ್ಬಳಕೆಯಾಗಬೇಕು ಅನೇಕ ಪಾಶ್ಚಾತ್ಯ ರಾಷ್ಟ್ರಗಳು ಯುವಶಕ್ತಿಯನ್ನು ಸಮರ್ಪಕವಾಗಿ ಬಳಸಿಕೊಂಡಿರುವುದರಿಂದ ಅಭಿವೃದ್ಧಿ ಸಾಧ್ಯ' ಎಂದರು.

'ಶತಮಾನದ ಸ್ಮರಣೆಯರು' ಕೃತಿಯನ್ನು ಬಿಡುಗಡೆ ಮಾಡಿದ ಭಾರೀ ನೀರಾವರಿ ಸಚಿವರಾದ ಶ್ರೀ ಬಸವರಾಜ ಬೊಮ್ಮಾಯಿ ಯವರು ಮಾತನಾಡಿ "ಸ್ವಾತಂತ್ರ್ಯ ಪೂರ್ವದಲ್ಲಿ ಯುವ ಜನರಿಗೆ ಲೋಕಮಾನ್ಯ ತಿಲಕ್, ನೇತಾಜಿ, ಭಗತ್‌ಸಿಂಗ್, ಕಿತ್ತೂರುರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ ಮುಂತಾದ ಮಹಾನ್ ನಾಯಕರು ಆದರ್ಶವಾಗಿದ್ದರು. ಸ್ವಾತಂತ್ರ್ಯಾನಂತರ ಲೋಕನಾಯಕ ಜಯಪ್ರಕಾಶ್ ನಾರಾಯಣ್ ಆ ಸ್ಥಾನ ತುಂಬಿದರು. ಆದರೆ ಇಂದು ಯುವಜನರಿಗೆ ಮಾದರಿಯಾಗುವಂತಹ ನಾಯಕರ ಕೊರತೆ ಎದ್ದು ಕಾಣುತ್ತದೆ' ಎಂದರು.

**ವಿಷಯ ಮಂಡನೆ**

ಭಾರತದ ಯುವ ಜನತೆ ಕುರಿತು ಶ್ರೀ ಎಸ್. ಷಡಕ್ಷರಿ, ಕ್ರೀಡೆಯನ್ನು ಕುರಿತು ಶ್ರೀ ಅರ್ಜುನದೇವಯ್ಯ, ಸಾಮಾಜಿಕ ವಿಷಯವನ್ನು ಕುರಿತು ಶ್ರೀ ಬಿ.ಎಲ್. ಶಂಕರ್, ಸುದ್ಧಿಮಾಧ್ಯಮ ಕುರಿತು ಡಾ. ಟಿ.ಸಿ. ಪೂರ್ಣಿಮಾ ವಿಚಾರ ಮಂಡಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಉನ್ನತ ಶಿಕ್ಷಣ ಸಚಿವರಾದ ಶ್ರೀ ಅರವಿಂದ ಲಿಂಬಾವಳಿ ಅವರು ಮಾತನಾಡಿ "ಭಯೋತ್ಪಾದನೆಯ ಅಟ್ಟಹಾಸ ಇಂದು ಎಲ್ಲಾ ಕಡೆಗೂ ವ್ಯಾಪಿಸಿದೆ. ಅದನ್ನು ನಿಯಂತ್ರಿಸುವುದು ದೊಡ್ಡ ಸವಾಲಾಗಿದೆ. ಈ ನಿಟ್ಟಿನಲ್ಲಿ ಯುವಜನತೆ ಜಾಗೃತರಾಗಿ ದೇಶವನ್ನು ರಕ್ಷಿಸುವ ಗುರುತರವಾದ ಜವಾಬ್ದಾರಿ ಯುವಕರ ಮೇಲಿದೆ" ಎಂದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮಾಜಿ ಮುಖ್ಯಮಂತ್ರಿ ಶ್ರೀ ಹೆಚ್.ಡಿ. ಕುಮಾರಸ್ವಾಮಿಯವರು "ಜನ್ಮ ಶತಮಾನೋತ್ಸವದಲ್ಲಿ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರು ನೀಡಿರುವ ದಿವ್ಯ ಸಂದೇಶವನ್ನು ಅನುಷ್ಠಾನಕ್ಕೆ ತರಲು ಪ್ರತಿಯೊಬ್ಬರೂ ಮನಸ್ಸು ಮಾಡಬೇಕು" ಎಂದು ಕರೆ ನೀಡಿದರು.

ಪೂಜ್ಯ ಶ್ರೀ ಶ್ರೀಗಳವರಿಗೆ ಪುಷ್ಪವೃಷ್ಟಿ ಮಾಡುವುದರ ಶ್ರೀ ಎಲ್.ಕೆ. ಅಡ್ವಾನಿ ಅವರಿಂದ ಭಕ್ತಿ ಸಮರ್ಪಣೆ

ಆಪ್ತ ಸಮಾಲೋಚನೆಯಲ್ಲಿ ಗುರು-ಶಿಷ್ಯರು

ನ್ಯಾ. ಡಾ. ಶಿವರಾಜ ವ್ಹಿ. ಪಾಟೀಲ ಅವರು ಸಿದ್ಧಗಂಗಾ ಕ್ಷೇತ್ರ ಕೃತಿ ಬಿಡುಗಡೆ ಮಾಡಿ ಮಾತನಾಡುತ್ತಿರುವುದು

ಅವರು ತಮ್ಮ ಭಾಷಣದಲ್ಲಿ "ಶ್ರೀಗಳವರ ಸೇವೆ ಮತ್ತು ಮಾರ್ಗದರ್ಶನ ಸಮಾಜಕ್ಕೆ ಇನ್ನಷ್ಟು ಕಾಲ ಅಗತ್ಯವಿದೆ. ಸಮಾಜಕ್ಕೆ ಪ್ರಾಮಾಣಿಕತೆಯಿಂದ ನಿಸ್ವಾರ್ಥಸೇವೆ ಸಲ್ಲಿಸಬೇಕು. ಜೊತೆಗೆ ಪ್ರತಿಯೊಬ್ಬರೂ ಪೂಜ್ಯ ಶ್ರೀಗಳವರು ಹೇಳುವಂತೆ ಕಾಯಕ ನಿರತರಾಗಲು ಯುವಜನತೆ ತಮ್ಮನ್ನು ತಾವು ತೊಡಗಿಸಿಕೊಳ್ಳಬೇಕು" ಎಂದು ತಿಳಿಸಿದರು.

ಪ್ರಾರಂಭದಲ್ಲಿ ವಿಜ್ಞಾನ ಪರಿಷತ್ತಿನ ಅಧ್ಯಕ್ಷ ಡಾ. ಹೆಚ್.ಎಸ್. ನಿರಂಜನಾರಾಧ್ಯ ಅವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಪ್ರಸ್ತುತ ಪರಿಸ್ಥಿತಿಯಲ್ಲಿ ಯುವಜನ ಸಮಾವೇಶ ಅಗತ್ಯತೆ ಹಾಗೂ ಮಹತ್ವವನ್ನು ಕುರಿತು ಬೆಳಕು ಚೆಲ್ಲಿದರು.

ಸಾನ್ನಿಧ್ಯ ವಹಿಸಿದ್ದ ಆನಂದಪುರ ಹಾಗೂ ಕನಕಪುರ ದೇಗುಲ ಮಠದ ಶ್ರೀಗಳು ತಮ್ಮ ಅನುಗ್ರಹ ನುಡಿಗಳಲ್ಲಿ ಪರಮಪೂಜ್ಯ ಶ್ರೀಗಳವರು ನಾಡಿಗೆ ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ಶ್ಲಾಘಿಸಿದರು.

ವೇದಿಕೆಯಲ್ಲಿ ಶಾಸಕರಾದ ಶ್ರೀ ಸಿ.ಬಿ. ಸುರೇಶ್ ಬಾಬು, ಶ್ರೀ ಎಂ.ಪಿ. ರೇಣುಕಾಚಾರ್ಯ, ಶ್ರೀ ಎಚ್.ಸಿ. ಬಾಲಕೃಷ್ಣ, ಮಾಜಿ ಸಚಿವ ಶ್ರೀ ಚೆಲುವರಾಯಸ್ವಾಮಿ, ಮಾಜಿ ಶಾಸಕ ಶ್ರೀ ಮುದ್ದಹನುಮೇಗೌಡ, ನ್ಯಾಯಮೂರ್ತಿ ವಿ.ಎಸ್. ಮಳಿಮಠ, ನ್ಯಾಯಮೂರ್ತಿ ಶಿವರಾಜ ಪಾಟೀಲ ಶ್ರೀ ವಿ. ಸೋಮಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

## ಸಮಾರೋಪ ಸಮಾರಂಭ

ಫೆಬ್ರವರಿ ೪ರ ಮಧ್ಯಾಹ್ನ ಶತಾಯುಷಿ, ಕರ್ನಾಟಕ ರತ್ನ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಸಮಾರೋಪ ಸಮಾರಂಭ ನಡೆಯಿತು. ಸಾನ್ನಿಧ್ಯವನ್ನು ಶ್ರೀ ಸುತ್ತೂರು ವೀರಸಿಂಹಾಸನ ಮಹಾಸಂಸ್ಥಾನ ಮಠದ ಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ವಹಿಸಿದ್ದರು.

ಸಮಾರೋಪ ನುಡಿಗಳನ್ನಾಡಿದ ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ನ್ಯಾಯಮೂರ್ತಿ ಶ್ರೀ ಪಾಲ್‌ಡೇನಿಯಲ್ ದಿನಕರನ್ ಅವರು "ದಯೆ, ಅನುಕಂಪ, ದಾಸೋಹ, ಆದರ್ಶಗಳಿಂದ ಶ್ರೀಗಳು 'ಜೀವಂತ ಸಾಹಿತ್ಯ' ನಮ್ಮ ಮುಂದಿದ್ದಾರೆ. ಶಿಕ್ಷಣವಿಲ್ಲದೇ ಉತ್ತಮ ಸಮಾಜ ನಿರ್ಮಾಣ ಸಾಧ್ಯವಿಲ್ಲ. ಶಿಕ್ಷಣದಿಂದ ಮಾತ್ರ ಸಮಾಜದ ಪ್ರಗತಿ ಸಾಧ್ಯ. ಜನರಿಗೆ ತಲುಪದ ಸಾಹಿತ್ಯಕ್ಕೆ ಅರ್ಥವಿಲ್ಲ. ಸಂಸ್ಕೃತಿ, ಪರಂಪರೆ,




ಮಾಜಿ ಉಪ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಅವರಿಗೆ ಶಾಸಕ ಶ್ರೀ ವಿ. ಸೋಮಣ್ಣ ಅವರಿಂದ ಸನ್ಮಾನ



ಧಾರ್ಮಿಕ ಸಮಾವೇಶದಲ್ಲಿ ಪೂಜ್ಯ ಶ್ರೀ ವೀರೇಶಾನಂದ ಮಹಾಸ್ವಾಮಿಗಳವರಿಂದ ನುಡಿನಮನ




ಶತಮಾನೋತ್ಸವ ಸಮಿತಿಯ ಕಾರ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಮುದ್ದಪ್ಪನವರಿಗೆ ಶ್ರೀ ಎಲ್.ಕೆ. ಅಡ್ವಾನಿ ಅವರಿಂದ ಸನ್ಮಾನ








ಸಚಿವ ಶ್ರೀ ಎಸ್. ಸುರೇಶ್‌ಕುಮಾರ್ ಅವರಿಗೆ ಸಂಚಾಲಕರಾದ ಶ್ರೀ ವಿ. ಸೋಮಣ್ಣನವರಿಂದ ಸನ್ಮಾನ



ಶಾಸಕರಾದ ಶ್ರೀ ಸುರೇಶ್‌ಗೌಡ ಅವರಿಗೆ ಸಂಚಾಲಕರಾದ ಶ್ರೀ ವಿ. ಸೋಮಣ್ಣನವರಿಂದ ಸನ್ಮಾನ



ಸಚಿವರಾದ ಶ್ರೀ ಮುಮ್ತಾಜ್ ಅಲಿಖಾನ್ ಅವರಿಗೆ ಸಂಚಾಲಕರಾದ ಶ್ರೀ ವಿ. ಸೋಮಣ್ಣನವರಿಂದ ಸನ್ಮಾನ

ಉಳಿಯುವಿಕೆಯಿಂದ ಸಮಾಜಕ್ಕೆ ಲಾಭವಾಗಲಿದೆ" ಎಂದರು. ಪೂಜ್ಯಶ್ರೀಗಳು "ಎಲ್ಲ ಜಾತಿ, ಧರ್ಮದ ಬಡಮಕ್ಕಳಿಗೆ ಶಿಕ್ಷಣ ಆತ್ಮಸ್ಥೈರ್ಯ ನೀಡುವ ಮೂಲಕ ಆದರ್ಶ ಸಮಾಜ ನಿರ್ಮಾಣಕ್ಕೆ ಬುನಾದಿ ಹಾಕಿದ್ದಾರೆ. ಶ್ರೀಗಳು ಶ್ರೀಕ್ಷೇತ್ರದಲ್ಲಿ ಅನುಷ್ಠಾನಗೊಳಿಸುವ ಕಾಯಕ–ದಾಸೋಹ ಸಾರ್ವಕಾಲಿಕವಾಗಿದೆ" ಎಂದು ಹೇಳಿದರು.

ಮುಖ್ಯ ನ್ಯಾಯಮೂರ್ತಿಗಳ ಇಂಗ್ಲೀಷ್ ಭಾಷಣವನ್ನು ತುಮಕೂರು ಜಿಲ್ಲಾಧಿಕಾರಿ ಹಾಗೂ ಸಾಹಿತಿಗಳೂ ಆದ ಡಾ. ಸಿ. ಸೋಮಶೇಖರ್ ಅವರು ಅರ್ಥಪೂರ್ಣವಾಗಿ ಭಾಷಾಂತರರಿಸಿ ಪ್ರೇಕ್ಷಕರ ಹೃದಯವನ್ನು ಮುಟ್ಟುವಂತೆ ಮಾಡಿದರು. ಜಿಲ್ಲಾಧಿಕಾರಿಗಳ ಭಾಷಾಂತರ ಪ್ರೌಢಿಮೆಯನ್ನು ಮುಖ್ಯ ನ್ಯಾಯಮೂರ್ತಿಗಳು ಶ್ಲಾಘಿಸಿದರು.

## 'ಸಿದ್ಧಗಂಗಾ ಶ್ರೀ' ಪ್ರಶಸ್ತಿ ಪ್ರದಾನ

ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘದಿಂದ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರಿಗೆ 'ಸಿದ್ಧಗಂಗಾ ಶ್ರೀ' ಪ್ರಶಸ್ತಿ ಪ್ರಧಾನ ಮಾಡಿ ಗೌರವಿಸಲಾಯಿತು. ಪ್ರಶಸ್ತಿಯೊಂದಿಗೆ ೧ ಲಕ್ಷ ರೂ. ನಗದು, ನೆನಪಿನ ಕಾಣಿಕೆ ನೀಡಿ ಶಾಲು ಹೊದಿಸಿ ಪರಮಪೂಜ್ಯ ಶ್ರೀಗಳವರು ಸನ್ಮಾನಿಸಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಹೈಕೋರ್ಟ್ ಮುಖ್ಯ ನ್ಯಾಯಮೂರ್ತಿ ಪಿ.ಡಿ. ದಿನಕರನ್, ಶತಮಾನೋತ್ಸವ ಸಮಿತಿ ಸಂಚಾಲಕ ಶ್ರೀ ವಿ. ಸೋಮಣ್ಣ, ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘದ ಪ್ರಧಾನ ಕಾರ್ಯದರ್ಶಿ ಡಾ. ಎಂ.ಎನ್. ಚನ್ನಬಸಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದಿಂದ ಇದೇ ಮೊದಲ ಬಾರಿಗೆ ಪ್ರಾರಂಭಿಸಿದ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ, ರಾಷ್ಟ್ರಕವಿಗಳೂ ಆದ ಡಾ. ಜಿ.ಎಸ್. ಶಿವರುದ್ರಪ್ಪನವರನ್ನು ಆಯ್ಕೆ ಮಾಡಲಾಗಿತ್ತು.

ಪ್ರಶಸ್ತಿಯನ್ನು ವಿನಯಪೂರ್ವಕವಾಗಿ ಸ್ವೀಕರಿಸಿ ಡಾ. ಜಿ.ಎಸ್. ಶಿವರುದ್ರಪ್ಪನವರು "ಸನ್ಯಾಸಿಯಾಗಿ ಕೇವಲ ತಮ್ಮ ಮೋಕ್ಷ ಸಾಧನೆಯನ್ನೇ ಗುರಿಯಾಗಿಟ್ಟುಕೊಳ್ಳುವುದು ಸರಿಯಲ್ಲ. ಸಮಾಜಕ್ಕೂ ಜ್ಯೋತಿಯಾಗಬೇಕು ಅದನ್ನು ಶ್ರೀ ಸಿದ್ಧಗಂಗಾ ಶ್ರೀಗಳು ಮಾಡಿ ತೋರಿಸಿದ್ದಾರೆ" ಎಂದರು.

"ನಾನು ಹೈಸ್ಕೂಲ್ ವಿದ್ಯಾಭ್ಯಾಸ ಮಾಡುವಾಗ ಮಠದ ಆಶ್ರಯ, ದಾಸೋಹ ಪಡೆದೆ. ಇಲ್ಲಿನ ವಾತಾವರಣ, ಗುರುಗಳ ಹಿತವಚನಗಳಿಂದ ನನ್ನ ಕವಿತಾಶಕ್ತಿ ಇಲ್ಲಿಯೇ ಒಡಮೂಡಿತು"




ಕರ್ನಾಟಕ ವಿಧಾನಸಭಾ ಅಧ್ಯಕ್ಷರಾದ
ಶ್ರೀ ಜಗದೀಶ್ ಶೆಟ್ಟರ್ ಅವರಿಂದ ಯುವಜನ ಸಮಾವೇಶ ಉದ್ಘಾಟನೆ

ಎಂದ ಡಾ. ಶಿವರುದ್ರಪ್ಪನವರು ಮಠದಲ್ಲಿ ಅಂದು ನಡೆಯುತ್ತಿದ್ದ ಕಾಯಕ ಸ್ಮರಿಸಿದರು.

### ಪ್ರಶಸ್ತಿ ಹಣ ದಾಸೋಹ ನಿಧಿಗೆ

ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ತಮ್ಮ ಭವಿಷ್ಯವನ್ನು ರೂಪಿಸಿದ ಶ್ರೀಮಠದಿಂದಲೇ 'ಶ್ರೀ ಸಿದ್ಧಗಂಗಾ ಶ್ರೀ' ಪ್ರಶಸ್ತಿಯನ್ನು ನೀಡಲು ಆಯ್ಕೆ ಮಾಡಿದ್ದಕ್ಕೆ ಹರ್ಷವನ್ನು ವ್ಯಕ್ತಪಡಿಸಿ ಪ್ರಶಸ್ತಿಯೊಂದಿಗೆ ನೀಡಿದ ಒಂದು ಲಕ್ಷ ರೂ.ಗಳನ್ನು ಶ್ರೀಮಠದ ದಾಸೋಹ ನಿಧಿಗೆ ಅರ್ಪಿಸುವುದಾಗಿ ತಿಳಿಸಿದರು. ಪ್ರಶಸ್ತಿ ವಾಚನವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಹಾಗೂ ಕರ್ನಾಟಕ ಜಾನಪದ ಅಕಾಡೆಮಿ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಅವರು ನಡೆಸಿಕೊಟ್ಟರು.

### ಕೃತಜ್ಞತಾ ನುಡಿ

ಶತಮಾನೋತ್ಸವ ಸಮಾರಂಭದ ಯಶಸ್ಸಿನ ರೂವಾರಿಗಳೂ, ಶಾಸಕರೂ, ಶತಮಾನೋತ್ಸವ ಸಮಿತಿಯ ಸಂಚಾಲಕರೂ ಆದ ಶ್ರೀ ವಿ. ಸೋಮಣ್ಣನವರು ತಮ್ಮ ಕೃತಜ್ಞತಾ ನುಡಿಗಳಲ್ಲಿ ಸಮಾರಂಭದ ಯಶಸ್ಸಿಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಕರಿಸಿದವರಿಗೆ ಶತಮಾನೋತ್ಸವ ಸಮಿತಿಯ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸಿದರು.

"ಶತಾಯುಷಿ, ನಮ್ಮೆಲ್ಲರ ಆರಾಧ್ಯದೈವ, ನಡೆದಾಡುವ ದೇವರು, ಮಹಾತಪಸ್ವಿ. ನಮ್ಮ ರಾಷ್ಟ್ರಕಂಡ ಮಹಾಸಂತ, ಮಾನವತಾವಾದಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಶತಮಾನೋತ್ಸವ ಸಮಾರಂಭದಲ್ಲಿ ಭಾಗಿಯಾಗಿ ಕಿಂಚಿತ್ತು ಸೇವೆ ಸಲ್ಲಿಸಲು ಅವಕಾಶ ದೊರತದ್ದು ನಮ್ಮೆಲ್ಲರ ಪೂರ್ವಜನ್ಮದ ಪುಣ್ಯ. ಕಳೆದ ಎಂಬತ್ತು ವರ್ಷಗಳಿಂದ ಜಾತಿಭೇದವಿಲ್ಲದೆ ಲಕ್ಷ ಲಕ್ಷ ಜನ ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸಿ ಅವರ ಬಾಳಿಗೆ ಬೆಳಕಾಗಿರುವ ಪೂಜ್ಯ ಶ್ರೀಗಳವರು ಸಲ್ಲಿಸುತ್ತಿರುವ ಸೇವೆಯನ್ನು ಶಬ್ದಗಳಲ್ಲಿ ಹಿಡಿದಿಡಲು ಸಾಧ್ಯವಿಲ್ಲ. ಅವರು ಇನ್ನೂ ಹತ್ತಾರು ವರ್ಷಗಳು ನಮ್ಮೊಂದಿಗಿದ್ದು ನಮ್ಮೆಲ್ಲರನ್ನು ಆಶೀರ್ವದಿಸಿ ಅವರ ಆಶೀರ್ವಾದ ಮಾರ್ಗದರ್ಶನ ಪಡೆಯುವ ಭಾಗ್ಯ ನಮ್ಮದಾಗಲಿ" ಎಂದು ಭಾವುಕರಾಗಿ ನುಡಿದರು.





### ಅಂಚೆ ಲಕೋಟೆ ಬಿಡುಗಡೆ

ಇದೇ ಸಂದರ್ಭದಲ್ಲಿ ಅಂಚೆ ಇಲಾಖೆ ಹೊರತಂದಿರುವ ಪೂಜ್ಯ ಶ್ರೀಗಳವರ ಅಂಚೆ ಲಕೋಟೆಯನ್ನು ಕರ್ನಾಟಕ ವಿಧಾನಪರಿಷತ್ತು ಸಭಾಪತಿಗಳಾದ ಶ್ರೀ ವೀರಣ್ಣ ಮತ್ತಿಕಟ್ಟಿ ಅವರು ಲೋಕಾರ್ಪಣೆ ಮಾಡಿ, ಕರ್ನಾಟಕ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಪರಮಪೂಜ್ಯ ಶ್ರೀಗಳವರು ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ತುಂಬು ಹೃದಯದಿಂದ ಶ್ಲಾಘಿಸಿದರು.

ಅಧ್ಯಕ್ಷತೆ ವಹಿಸಿದ್ದ ರಾಜ್ಯಸಭಾ ಸದಸ್ಯರು, ಮಾಜಿ ಮುಖ್ಯಮಂತ್ರಿಗಳೂ ಹಾಗೂ ಮಹಾರಾಷ್ಟ್ರದ ಮಾಜಿ ರಾಜ್ಯಪಾಲರೂ ಆದ ಶ್ರೀ ಎಸ್.ಎಂ. ಕೃಷ್ಣ ಅವರು ಮಾತನಾಡಿ "ದೇವರು ನಮ್ಮ ಆಯುಸ್ಸನ್ನು ಒಂದೊಂದು ದಿನ ಕಡಿಮೆ ಮಾಡಿದರೂ ಅಡ್ಡಿಯಿಲ್ಲ. ಪೂಜ್ಯ ಶ್ರೀಗಳವರ ಆಯುಷ್ಯವನ್ನು ಇನ್ನೂ ಹತ್ತಾರು ವರ್ಷ ಹೆಚ್ಚಿಸಿ ಎಲ್ಲರ ಮುಂದೆ ಹೀಗೆ ಇರುವಂತೆ ಮಾಡಲಿ" ಎಂದು ನುಡಿದಾಗ ಇಡೀ ಭಕ್ತವೃಂದ ಕ್ಷಣಕಾಲ ಭಾವುಕರಾಗಿ, ಮನಸ್ಸಿನಲ್ಲಿಯೇ ಶ್ರೀ ಎಸ್.ಎಂ. ಕೃಷ್ಣ ಅವರ ಅಂತರಾಳದ ಮಾತುಗಳಿಗೆ ಸ್ಪಂದಿಸಿದರು.

ಶ್ರೀ ಕೃಷ್ಣ ಅವರು ತಮ್ಮ ಭಾಷಣದಲ್ಲಿ "ಮೂರು ತಲೆಮಾರಿನಿಂದ ನಮ್ಮ ಮನೆತನದವರು ಸಿದ್ಧಗಂಗಾ ಮಠದ ಭಕ್ತರಾಗಿದ್ದೇವೆ. ನಮ್ಮ ಮನೆತನಕ್ಕೆ ಶ್ರೀಗಳವರ ಆಶೀರ್ವಾದದಿಂದ ತುಂಬಾ ಅನುಕೂಲವಾಗಿದೆ ನಾನು ಶ್ರೀಮಠಕ್ಕೆ ಮೂರನೆ ತಲೆಮಾರಿನ ಶಿಷ್ಯ" ಎಂದು ಹೆಮ್ಮೆಯಿಂದ ಹೇಳಿದರು.

"ಸಂಕಷ್ಟಗಳು ಎದುರಾಗಿ ತಲೆಬಿಸಿ ಹೆಚ್ಚಿದಾಗೆಲ್ಲ ರಾಜಕಾರಣಿಗಳಾದ ನಾವು ಮಠಕ್ಕೆ ಬರುತ್ತೇವೆ. ಸ್ವಾಮೀಜಿಗಳು ನಮ್ಮ ತಲೆಬಿಸಿ ತಣ್ಣಗೆ ಮಾಡಿ ಕಳುಹಿಸುತ್ತಾರೆ" ಎಂದು ಹಾಸ್ಯಮಯವಾಗಿ ತಿಳಿಸಿದ ಶ್ರೀ ಕೃಷ್ಣ ಅವರು ತಾವು ಮುಖ್ಯ ಮಂತ್ರಿಯಾಗಿದ್ದಾಗ ಇದರ ಆರಂಭವಾಗಿದೆ. ಸಮಸ್ಯೆಗಳು ಎದುರಾದಾಗ ಅವುಗಳನ್ನು ಸುಲಭವಾಗಿ ಬಗೆಹರಿಸುವ ಮಠಗಳು ಅದೆಲ್ಲ ಪೂಜ್ಯ ಶ್ರೀಗಳವರ ಆಶೀರ್ವಾದದಿಂದ ಸಾಧ್ಯವಾಗಿದೆ ಎಂದರು.

ಸಾನ್ನಿಧ್ಯ ವಹಿಸಿದ್ದ ಸುತ್ತೂರು ಜಗದ್ಗುರುಗಳು ತಮ್ಮ ನುಡಿ ನಮನದಲ್ಲಿ 'ನೂರು ವರ್ಷಗಳಿಂದಲೂ ಸ್ವಾಮೀಜಿಗಳ ಅಂತರಂಗ ದೃಷ್ಟಿ ವಿಕಾಸಗೊಳ್ಳುತ್ತಲೇ ಇದ್ದು ಎಲ್ಲರ ನೋವುಗಳನ್ನು ಆಲಿಸಿ,



ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರಿಂದ
ಶ್ರೀ ಜಗದೀಶ್ ಶೆಟ್ಟರ್ ಅವರಿಗೆ ಆಶೀರ್ವಾದ




ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರಿಂದ
ಸಚಿವರಾದ ಶ್ರೀ ಅರವಿಂದ ಲಿಂಬಾವಳಿ ಅವರಿಗೆ
ಆಶೀರ್ವಾದ




ಸಚಿವರಾದ ಶ್ರೀ ಬಸವರಾಜ ಬೊಮ್ಮಾಯಿ ಅವರಿಂದ
'ಶತಮಾನದ ಸ್ಮರಣೆಯರು' ಕೃತಿ ಬಿಡುಗಡೆ



ಕನಕಪುರ ದೇಗುಲಮಠದ ಪೂಜ್ಯ ಶ್ರೀಗಳವರಿಂದ
ಶ್ರೀ ಬಸವರಾಜ ಬೊಮ್ಮಾಯಿ ಅವರಿಗೆ ಆಶೀರ್ವಾದ



ಶ್ರೀ ಬಿ.ಎಲ್. ಶಂಕರ್‌ರವರಿಗೆ ಪೂಜ್ಯ ಜಗದ್ಗುರು
ಶ್ರೀ ಮಲ್ಲಿಕಾರ್ಜುನ ಮುರುಘಾರಾಜೇಂದ್ರ
ಮಹಾಸ್ವಾಮಿಗಳವರಿಂದ ಆಶೀರ್ವಾದ



ಆನಂದಾಪುರದ ಶ್ರೀಗಳವರಿಂದ
ಉದ್ಯಮಿ ಶ್ರೀ ಎಸ್. ಷಡಕ್ಷರಿ ಅವರಿಗೆ ಆಶೀರ್ವಾದ

ಸಾಂತ್ವನ ಹೇಳುತ್ತಿದ್ದಾರೆ. ಎಂಟು ದಶಕಗಳಲ್ಲಿ ಸಮಾಜಕ್ಕೆ ಅನನ್ಯ ಸೇವೆ ಸಲ್ಲಿಸಿದ್ದಾರೆ' ಎಂದು ಪ್ರಶಂಸಿಸಿದರು.

### ಅನುಭಾವ ಜ್ಯೋತಿ

ಸಮಾರೋಪ ಸಮಾವೇಶದ ದಿವ್ಯ ಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀಗಳವರು ತಮ್ಮ ದಿವ್ಯ ಸಂದೇಶದಲ್ಲಿ "ಭಾರತೀಯತೆ ಮತ್ತು ಧರ್ಮವನ್ನು ಇಂದು ಉಳಿಸಿಕೊಳ್ಳುವುದು ಅಗತ್ಯವಾಗಿದೆ. ದ್ವೇಷ, ಅಸೂಯೆ, ಬೇಡ ಯಾವುದೇ ಸಮಸ್ಯೆಗಳಿದ್ದರೂ ಚರ್ಚಿಸಿ ಬಗೆಹರಿಸಿಕೊಂಡು ಪ್ರತಿಯೊಬ್ಬರೂ ಒಗ್ಗಟ್ಟು ಮತ್ತು ಸಹಬಾಳ್ವೆಯಿಂದ ಜೀವನ ನಡೆಸಬೇಕು. ಆಗ ವಿಶ್ವದಲ್ಲಿ ಶಾಂತಿ ನೆಲೆಸುತ್ತಿದೆ. ಇಂದು ನಮ್ಮತನ ಮತ್ತು ಧರ್ಮವನ್ನು ಉಳಿಸಿಕೊಳ್ಳುವ ಅನಿವಾರ್ಯತೆ ಎದುರಾಗಿದೆ. ಭಾರತೀಯರಾದ ನಾವು ಆಧ್ಯಾತ್ಮಕ್ಕೆ ಹೆಚ್ಚು ಒತ್ತು ಕೊಡಬೇಕು ನಮ್ಮ ಸಂಸ್ಕೃತಿ ಮತ್ತು ಪರಂಪರೆಯನ್ನು ಮುಂದುವರಿಸಿಕೊಂಡು ಹೋಗಬೇಕು. ಜಾತೀಯತೆ, ಬಡತನ, ಭ್ರಷ್ಟಾಚಾರ ನಿರ್ಮೂಲನೆಯಾಗಬೇಕು. ದೇಶವನ್ನು ಸುಭದ್ರ ಮತ್ತು ಸಮರ್ಥವಾಗಿ ಕಟ್ಟಬೇಕಾದರೆ ಪ್ರತಿಯೊಬ್ಬರೂ ಕಾಯಕ ನಿರತರಾಗಬೇಕು ಬಡತನ ಮತ್ತು ಅಜ್ಞಾನ ದೇಶಕ್ಕೆ ಶತ್ರುಗಳಿದ್ದಂತೆ ಮೊದಲು ಅವುಗಳ ನಿವಾರಣೆ ಮಾಡಬೇಕು" ಎಂದು ತಿಳಿಸಿದರು.

"ಈ ಸಮಾರಂಭ ಪಕ್ಷಾತೀತ, ಜಾತ್ಯಾತೀತ ಸಮಾವೇಶ, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಭಕ್ತರು ಸೇರಿರುವುದ ಸಂತಸ ನಿಡಿದೆ ಎಂದು ತಮ್ಮ ಭಾವನೆಯನ್ನು ವ್ಯಕ್ತಪಡಿಸಿದ ಶ್ರೀಗಳು, ಸ್ವಾಮಿಗಳು ಹೇಗಿರಬೇಕೆಂಬ ಬಗ್ಗೆ ಏನೇನೂ ಗೊತ್ತಿರಲಿಲ್ಲ. ಆಗಲೇ ಸನ್ಯಾಸತ್ವ ಸ್ವೀಕರಿಸಿದೆ. ಮಠದ ಅಧಿಕಾರ ವಹಿಸಿಕೊಂಡ ಮೇಲೆ ಜವಾಬ್ದಾರಿಯೂ ಹೆಚ್ಚಾಯಿತು. ಮಠಕ್ಕೆ ಬಂದಾಗ ಹಣ, ಆಸ್ತಿ ಏನೂ ಇರಲಿಲ್ಲ. ಆಗ ೧೬ ಎಕರೆ ಜಮೀನು ಮಾತ್ರ ಇತ್ತು. ಸ್ವತಃ ನಾನೇ ಅಡುಗೆ ಮಾಡಿರುವ ದಿನಗಳೂ ಇವೆ. ಕ್ರಮೇಣ ಕೂಲಿಕಾರರು ರೈತರು ತಮ್ಮ ದುಡಿಮೆಯ ಒಂದು ಭಾಗವನ್ನು ಮಠಕ್ಕೆ ನೀಡಿದ್ದಾರೆ. ಅವರೆಲ್ಲರ ತ್ಯಾಗದ ಫಲದಿಂದ ಮಠ ಈ ಸ್ಥಿತಿಗೆ ಬಂದಿದೆ' ಎಂದರು.

ಒಂದು ಗಂಟೆಗೂ ಹೆಚ್ಚು ಕಾಲ ನಿರರ್ಗಳವಾಗಿ ಸಂದೇಶ ನೀಡಿದ ಪೂಜ್ಯ ಶ್ರೀಗಳು "ತಾವು ಹುಟ್ಟಿದ ಪರಿಸರದಲ್ಲಿ ಓದುವ ಪರಿಸ್ಥಿತಿಯೇ ಇರಲಿಲ್ಲ. ಕೂಲಿ ಮಠದಲ್ಲಿ ಓದು ಆರಂಭಿಸಿದೆ. ಬಳಿಕ ನಾಗವಲ್ಲಿಯ ಪ್ರಾಥಮಿಕ ಶಾಲೆಗೆ ಸೇರಿದೆ. ಪ್ರೌಢಶಾಲೆಗೆ ತುಮಕೂರಿಗೆ ಬಂದೆ. ಮಠದ ಸಂಪರ್ಕ ಬೆಳೆಯಿತು. ಪದವಿ







ಪರಮಪೂಜ್ಯ ಶ್ರೀ ಶ್ರೀಗಳವರಿಂದ ಮಾಜಿ ಮುಖ್ಯಮಂತ್ರಿ
ಶ್ರೀ ಹೆಚ್.ಡಿ. ಕುಮಾರಸ್ವಾಮಿ ಅವರಿಗೆ ಆಶೀರ್ವಾದ



ಆನಂದಾಪುರದ ಜಗದ್ಗುರುಗಳಿಂದ
ಡಾ. ಟಿ.ಸಿ. ಪೂರ್ಣಿಮಾ ಅವರಿಗೆ ಆಶೀರ್ವಾದ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಶಾಸಕ
ಡಾ. ಹೆಚ್.ಸಿ. ಬಾಲಕೃಷ್ಣ ಅವರಿಗೆ ಆಶೀರ್ವಾದ

ಶಿಕ್ಷಣಕ್ಕೆ ಬೆಂಗಳೂರಿಗೆ ಹೋದೆ. ಉದ್ದಾನ ಶಿವಯೋಗಿಗಳ ಉತ್ತರಾಧಿಕಾರಿಗಳಾಗಿದ್ದ ಮರುಳಾರಾಧ್ಯರು ಚಿಕ್ಕ ವಯಸ್ಸಿನಲ್ಲೇ ಲಿಂಗೈಕ್ಯರಾದರು. ಆಗ ಮಠಕ್ಕೆ ಬಂದಿದ್ದ ಉದ್ದಾನ ಶಿವಯೋಗಿಗಳ ಆದೇಶದಂತೆ ಉತ್ತರಾಧಿಕಾರಿಯಾಗಲು ಒಪ್ಪಿಗೆ ನೀಡಿದೆ. ಮನೆಯಲ್ಲಿ ಒಪ್ಪಿಗೆ ನೀಡಿರಲಿಲ್ಲ. ಆಗ ಮಠದಲ್ಲಿ ಆಸ್ತಿ, ಹಣ, ಸೌಲಭ್ಯ ಯಾವುದೂ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅಧಿಕಾರ ವಹಿಸಿಕೊಂಡು ಎಲ್ಲ ಜಾತಿ, ಸಮುದಾಯಗಳ ಜನರು, ಭಕ್ತರು, ತಾವು ಬೆಳೆದಿದ್ದರಲ್ಲೇ ಸ್ವಲ್ಪ ನೀಡುತ್ತಿದ್ದರು. ತುಮಕೂರು ಆಗ ಒಂದು ಗ್ರಾಮವಾಗಿತ್ತು. ಕ್ರಮೇಣ ಬೆಳೆಯಿತು. ಇಲ್ಲಿಯವರಿಗೂ ಎಲ್ಲರೂ ಮುಕ್ತ ಮನಸ್ಸಿನಿಂದ ಸಹಕಾರ, ನೀಡಿದರು" ಎಂದು ತಮ್ಮ ಭಾವನೆಗಳನ್ನು ಎಳೆ ಎಳೆಯಾಗಿ ಬಿಚ್ಚಿಟ್ಟರು.

ಪೂಜ್ಯ ಶ್ರೀಗಳು ತಮ್ಮ ಸಂದೇಶದಲ್ಲಿ "ಇಷ್ಟು ದೊಡ್ಡ ಸಮಾವೇಶ, ದಾಸೋಹ ನಡೆದಿದೆ. ಆದರೆ ಮಠದಿಂದ ದಾಸೋಹಕ್ಕೆಂದು ಒಂದು ರೂಪಾಯಿಯನ್ನು ಖರ್ಚು ಮಾಡಿಲ್ಲ. ಎಲ್ಲವನ್ನು ಭಕ್ತರು ಕೊಟ್ಟಿದ್ದಾರೆ. ಭಕ್ತರೆಲ್ಲರೂ ಸೇರಿ ಅಭಿಮಾನದಿಂದ ಶತಮಾನೋತ್ಸವ ಮಾಡಲು ನಿರ್ಧರಿಸಿದರು. ಎಲ್ಲವೂ ಭಗವಂತನ ಕೃಪೆಯಿಂದ ಸಾಂಗವಾಗಿ ನಡೆಯಿತು. ಬೆಲ್ಲ, ತುಪ್ಪ, ಬೇಳೆ, ಅಕ್ಕಿ, ಗೋಧಿ, ತರಕಾರಿ, ಸಕ್ಕರೆ, ಬಾಳೆ ಎಲೆ, ಕಟ್ಟಿಗೆ ಎಲ್ಲವನ್ನು ಭಕ್ತರು ಸಂತೋಷದಿಂದ ಕೊಟ್ಟರು. ದೇವನಹಳ್ಳಿ ಶ್ರೀ ಅಶ್ವತ್ಥ ನಾರಾಯಣ ಅವರು ಒಂದು ಸಾವಿರ ಕ್ವಿಂಟಾಲ್ ಅಕ್ಕಿ ಕೊಟ್ಟುರುವುದನ್ನು ಪ್ರಸ್ತಾಪಿಸಿದ ಶ್ರೀಗಳು ಭಕ್ತರ ಅಭಿಮಾನ, ಪ್ರೀತಿ, ವಿಶ್ವಾಸವನ್ನು ಮನದುಂಬಿ ಶ್ಲಾಘಿಸಿದರು.

ಈ ಸಂದರ್ಭದಲ್ಲಿ ಪೂಜ್ಯ ಶ್ರೀಗಳು ಸಮಾರಂಭದ ಯಶಸ್ಸಿಗೆ ಹಗಲಿರುಳು ದುಡಿದ ಶತಮಾನೋತ್ಸವ ಸಮಿತಿ ಸಂಚಾಲಕರಾದ ಶ್ರೀ ವಿ. ಸೋಮಣ್ಣ ಅವರ ಸೇವೆಯನ್ನು ಮುಕ್ತಕಂಠದಿಂದ ಪ್ರಶಂಸಿಸಿದರು. ಅಲ್ಲದೆ ತುಮಕೂರು ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್, ನಗರ ಸಭೆಯವರ ಸಹಕಾರವನ್ನು ಸ್ಮರಿಸಿದರು.

ನೂರು ತುಂಬಿತು, "ನೂರೊಂದು ತುಂಬುತ್ತಾ ಬಂದಿದ್ದೂ ಇನ್ನೂ ಎಷ್ಟು ಕಾಲ ಬದುಕುತ್ತೇನೋ ಗೊತ್ತಿಲ್ಲಾ. ಆದರೆ ಎಲ್ಲರೂ ಶಾಂತಿ ಸಹಬಾಳ್ವೆಯಿಂದ ಬಾಳಬೇಕು. ಲಕ್ಷಾಂತರ ಮಂದಿ ಸೇರಿದ್ದೀರಿ. ಮಠದಲ್ಲಿ ಮಾಡಿರುವ ಎಲ್ಲವೂ ಹೀಗೆ ಮುಂದುವರಿದುಕೊಂಡು ಹೋಗಬೇಕಾದರೆ ನಿಮ್ಮೆಲ್ಲರ ಸಹಕಾರ ಬೇಕು ಎಂದು ನುಡಿದರು.

ಪ್ರಾರಂಭದಲ್ಲಿ ಶ್ರೀ ವಿ. ಸೋಮಣ್ಣನವರು ಸ್ವಾಗತಿಸಿದರು. ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್ ಕಾರ್ಯಕ್ರಮವನ್ನು

ಕರ್ನಾಟಕ ಉಚ್ಛ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾದ
ನ್ಯಾಯಮೂರ್ತಿ ಪಾಲ್ ಡೇನಿಯಲ್ ದಿನಕರನ್ ಅವರಿಂದ ಸಮಾರೋಪ ಭಾಷಣ

ನಿರೂಪಿಸಿದರು. ವೇದಿಕೆಯಲ್ಲಿ ಶತಮಾನೋತ್ಸವ ಸಮಿತಿಯ ಗೌರವಾಧ್ಯಕ್ಷರಾದ ನ್ಯಾಯಮೂರ್ತಿ ಡಾ. ಶಿವರಾಜ ವಿ. ಪಾಟೀಲ ಅಧ್ಯಕ್ಷರಾದ ನ್ಯಾಯಮೂರ್ತಿ ಡಾ. ವಿ.ಎಸ್. ಮಳಿಮಠ, ಹೈಕೋರ್ಟ್ ನ್ಯಾಯಮೂರ್ತಿಗಳಾದ ಬನ್ನೂರುಮಠ, ಮಂಜುನಾಥ್, ರವಿ ಮಳಿಮಠ ಮಾಜಿ ಸಂಸದ ಶ್ರೀ ಜಿ.ಎಸ್. ಬಸವರಾಜು, ಶಾಸಕರಾದ ಶ್ರೀ ಟಿ.ಬಿ. ಜಯಚಂದ್ರ, ಶ್ರೀ ಎಚ್.ಎಸ್. ಮಹದೇವಪ್ಪನವರು ಮೊದಲಾದ ಗಣ್ಯರು ಉಪಸ್ಥಿತರಿದ್ದರು.

## ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು

ಶ್ರೀಮಠದ ಉತ್ತರಾಧಿಕಾರಿಗಳೂ ಆದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಸಮಾರಂಭದ ಯಶಸ್ಸಿಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡರು. ದಾಸೋಹ, ಕಾರ್ಯಕ್ರಮ, ಅತಿಥಿಗಳ ಯೋಗಕ್ಷೇಮ, ಹೀಗೆ ಹಲವಾರು ಕಾರ್ಯಗಳಲ್ಲಿ ಸಂಬಂಧಪಟ್ಟವರಿಗೆ ಸೂಕ್ತ ಮಾರ್ಗದರ್ಶನ ನೀಡಿದುದನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸಬಯಸುತ್ತೇನೆ.

## ಸಮಾರಂಭದ ಯಶಸ್ಸಿನ ರೂವಾರಿ ಶ್ರೀ ಸೋಮಣ್ಣನವರು

ಶ್ರೀ ವಿ. ಸೋಮಣ್ಣನವರೆಂದರೆ ಸಂಘಟನೆ, ಎಲ್ಲಿ ಸಂಘಟನೆಯಿರುತ್ತದೆಯೋ ಅಲ್ಲಿ ಸೋಮಣ್ಣನವರಿರುತ್ತಾರೆಂದೇ ಜನಜನಿತವಾದ ಮಾತು. ಶ್ರೀ ಸೋಮಣ್ಣನವರು ಶಿಸ್ತಿಗೆ, ಶ್ರದ್ಧೆಗೆ, ಕತೃತ್ವಶಕ್ತಿಗೆ ಹೆಸರಾದವರು. ಅವರದು ಸರಳತೆ, ವಿನಯ, ಸೌಜನ್ಯ, ಸದಾ ನಗುಮುಖ ಎಂಥವರನ್ನು ಆಕರ್ಷಿಸುವ ವ್ಯಕ್ತಿತ್ವ ಪೂಜ್ಯ ಶ್ರೀ ಶ್ರೀಗಳವರ ಪರಮಭಕ್ತರಾದ ಶ್ರೀ ವಿ. ಸೋಮಣ್ಣನವರು ಕಳೆದ ಮೂರು ತಿಂಗಳಿಂದ ಸಮಾರಂಭದ ಯಶಸ್ಸಿಗೆ ಹಗಲಿರುಳು ಅಹರ್ನಿಶಿ ದುಡಿದರು. ಮಾಡುವ ಕೆಲಸ ಸಣ್ಣದಿರಲಿ, ದೊಡ್ಡದಿರಲಿ ಅತ್ಯಂತ ಶ್ರದ್ಧೆ, ನಿಷ್ಠೆಯಿಂದ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಯಾವುದರಲ್ಲೂ ಲೋಪವಾಗದಂತೆ ಎಚ್ಚರಿಕೆಯಿಂದ ನೋಡಿಕೊಂಡರು. ಸಮಾರಂಭದ ವೇದಿಕೆ, ಪೆಂಡಾಲ್ ನಿರ್ಮಾಣ, ದಾಸೋಹ ವ್ಯವಸ್ಥೆ, ವಸತಿ, ಸಾರಿಗೆ ಸೌಕರ್ಯ, ಸಾಂಸ್ಕೃತಿಕ ಕಾರ್ಯಕ್ರಮಗಳ ಆಯೋಜನೆ, ಪ್ರಚಾರಕಾರ್ಯ, ಆಹ್ವಾನಪತ್ರಿಕೆ ಮುದ್ರಣ ವಿತರಣೆ ಹೀಗೆ ಹಲವಾರು





ವ್ಯವಸ್ಥೆಗಳ ಉಸ್ತುವಾರಿಯನ್ನು ವಹಿಸಿಕೊಂಡು ಸಮರ್ಪಕವಾಗಿ ನೋಡಿಕೊಂಡರು.

ಶ್ರೀ ಸೋಮಣ್ಣನವರಿದ್ದ ಕಡೆ ಕ್ರಿಯಾಶೀಲವಾದ ತಂಡವೇ ಸಿದ್ಧವಾಗಿರುತ್ತದೆ. ಈ ತಂಡದವರೆಲ್ಲರೂ ಶ್ರೀ ಸೋಮಣ್ಣನವರು ನೀಡುವ ಸೂಚನೆಗಳನ್ನು ಪಾಲಿಸಿ ಹಗಲಿರುಳು ದುಡಿದು ಸಮಾರಂಭದ ಯಶಸ್ಸಿಗೆ ಕಾರಣರಾಗಿದ್ದಾರೆ.

ಸಮಾರಂಭವೆಂದರೆ ಹೀಗಿರಬೇಕು ಎಂಬುದನ್ನು ಶ್ರೀ ಸೋಮಣ್ಣನವರು ತೋರಿಸಿಕೊಟ್ಟರು. ಇದೊಂದು ಚಾರಿತ್ರಿಕ ದಾಖಲೆ. ಅವರ ಸೇವೆ ಶ್ರೀಮಠಕ್ಕೆ ಮುಂದೆಯೂ ಇರಲಿ ಎಂದು ಆಶಿಸುತ್ತೇವೆ.

## ಪ್ರಚಾರ-ಪ್ರಸಾರ ಮಾಧ್ಯಮದವರ ಕೊಡುಗೆ

ಮೂರು ದಿನಗಳ ಕಾಲ ನಡೆದ ಅಭೂತಪೂರ್ವ ಸಮಾಂಭದ ವರದಿಯನ್ನು ನಾಡಿನ, ರಾಷ್ಟದ ಮನೆ ಮನೆಗಳಿಗೆ ಮುಟ್ಟಿಸಿದ ಕೀರ್ತಿ ಪ್ರಸಾರ ಹಾಗೂ ಪ್ರಚಾರ ಮಾಧ್ಯಮದವರಿಗೆ ಸಲ್ಲುತ್ತದೆ. ದೂರದರ್ಶನ ಚಾಲನ್‌ಗಳು, ದಿನ ಪತ್ರಿಕೆಗಳು ಸಮಸ್ತ ಕನ್ನಡಿಗರ ಅಭಿನಂದನೆಗೆ ಪಾತ್ರವಾದವು. ಸಮಾರಂಭವದ ಕಾರ್ಯಕಲಾಪಗಳು ಶಾಶ್ವತವಾಗಿ ಉಳಿಯುವಂತೆ ಮಾಡಲು ಅಕ್ಷರಗಳಲ್ಲಿ, ದೃಶ್ಯಗಳಲ್ಲಿ ದಾಖಲಿಸಿ ಇತಿಹಾಸ ನಿರ್ಮಾಣ ಮಾಡಿದವು. ಈ ಎಲ್ಲ ಮಾಧ್ಯಮಗಳ ಸಂಪಾದಕರಿಗೆ, ವರದಿಗಾರರಿಗೆ ಈ ಕಾರ್ಯದಲ್ಲಿ ನೆರವಾದವರೆಲ್ಲರಿಗೂ ಸ್ವಾಗತ ಸಮಿತಿಯ ಪರವಾಗಿ ಧನ್ಯವಾದಗಳು.

## ದಾಸೋಹ ವ್ಯವಸ್ಥೆ

'ಸಿದ್ಧಗಂಗೆ ಊಟಕ್ಕೆ ಚೆಂದ, ಶಿವಗಂಗೆ ನೋಟಕ್ಕೆ ಚೆಂದ' ಎಂಬುದು ಜನಜನಿತ ನಾಣ್ಣುಡಿ. ಆದರೆ ಈ ಸಲ ದಾಸೋಹ ವ್ಯವಸ್ಥೆಯನ್ನು ನೋಡಿದ ಮೇಲೆ ಭಕ್ತರೇ ನಾಣ್ಣುಡಿಯನು 'ಸಿದ್ಧಗಂಗೆ ಊಟಕ್ಕೆ ಚೆಂದ, ಸಿದ್ಧಗಂಗೆ ನೋಟಕ್ಕೂ ಚೆಂದ' ಎಂದು ಮಾರ್ಪಡಿಸಿದರು. ಮೊದಲೇ ಸಮಾರಂಭಕ್ಕೆ ಲಕ್ಷಾಂತರ ಮಂದಿ ಭಾಗವಹಿಸುತ್ತಾರೆಂಬ ನಿರೀಕ್ಷೆ ಇದ್ದುದರಿಂದ ಪ್ರಸಾದ ಸ್ವೀಕರಿಸಲು ಯಾರಿಗೂ ತೊಂದರೆಯಾಗಬಾರದೆಂದು ೧೭ ಕಡೆಗಳಲ್ಲಿ ದಾಸೋಹ ವ್ಯವಸ್ಥೆ ಮಾಡಲಾಗಿತ್ತು. ಪ್ರತಿಯೊಂದು ಕಡೆಯಲ್ಲೂ, ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗೆ ಸೇರಿದ ಶಿಕ್ಷಕರು ಉಸ್ತುವಾರಿ ವಹಿಸಿಕೊಂಡಿದ್ದರು. ಎಲ್ಲಿಯೂ ನೂಕು ನುಗ್ಗಲಾಗಲಿ, ತಡವಾಗಲಿ ಆಗದಂತೆ

ಪರಮಪೂಜ್ಯ ಶ್ರೀ ಶ್ರೀಗಳವರಿಂದ
ಮುಖ್ಯ ನ್ಯಾಯಮೂರ್ತಿಗಳವರಿಗೆ ಆಶೀರ್ವಾದ

ಮಹಾರಾಷ್ಟದ ಮಾಜಿ ರಾಜ್ಯಪಾಲರು, ರಾಜ್ಯಸಭಾ ಸದಸ್ಯರೂ
ಆದ ಶ್ರೀ ಎಸ್.ಎಂ. ಕೃಷ್ಣ ಅವರಿಗೆ
ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ

ಶ್ರೀ ಗೊ.ರು. ಚನ್ನಬಸಪ್ಪ ಅವರಿಂದ
ಸಿದ್ಧಗಂಗಾ ಶ್ರೀ ಪ್ರಶಸ್ತಿ ವಾಚನ




ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ರಾಷ್ಟಕವಿ ಡಾ. ಜಿ.ಎಸ್. ಶಿವರುದ್ರಪ್ಪ ಅವರಿಗೆ "ಸಿದ್ಧಗಂಗಾ ಶ್ರೀ" ಪ್ರಶಸ್ತಿ ಪ್ರದಾನ

ಸಂಘಟಕರು ನೋಡಿಕೊಂಡರು. ಸ್ವಯಂ ಸೇವಕರು ಶ್ರದ್ಧೆಯಿಂದ, ಪ್ರೀತಿಯಿಂದ ಪ್ರಸಾದ ಬಡಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು.

ಪೂಜ್ಯ ಶ್ರೀಗಳವರಿಗೆ ದಾಸೋಹ ವ್ಯವಸ್ಥೆ ಚೆನ್ನಾಗಿ ನಡೆಯಬೇಕು. ಬಂದವರು ತೃಪ್ತಿಯಾಗುವಂತೆ ಪ್ರಸಾದ ಸ್ವೀಕರಿಸಬೇಕೆಂಬುದು ಅವರ ಮನದಾಸೆ. ಅದಕ್ಕಾಗಿ ವಿವಿಧ ಭಕ್ಷ್ಯಗಳನ್ನು ಮಾಡುವಂತೆ ಆದೇಶ ನೀಡಿದ್ದರು.

ಫೆಬ್ರವರಿ ೨ ರಂದು ಬೆಳಿಗ್ಗೆ ಉಪ್ಪಿಟ್ಟು, ಕೇಸರಿಬಾತ್, ಮಾಡಿಸಿದ್ದರೆ, ಮಧ್ಯಾಹ್ನದ ಊಟಕ್ಕೆ ಉಪ್ಪಿನಕಾಯಿ, ಕೋಸಂಬರಿ, ಪಲ್ಯ, ಪಾಯಸ, ಸಿಹಿ ಬೂಂದಿ, ಕಾರಬೂಂದಿ, ಚಿತ್ರಾನ್ನ, ಅನ್ನ, ರಾತ್ರಿ ಸಾಂಬಾರು, ಮಜ್ಜಿಗೆ ಬಡಿಸಿದರೆ, ಉಪ್ಪಿನ ಕಾಯಿ, ಅನ್ನ, ಸಾಂಬಾರು, ಮಜ್ಜಿಗೆ ವ್ಯವಸ್ಥೆ ಮಾಡಿದ್ದರು.

ಸಮಾರಂಭದ ಎರಡನೆದಿನ ಬೆಳಿಗ್ಗೆ ತರಕಾರಿಬಾತ್, ಉಪಹಾರ ಸೇವಿಸಿದರೆ, ಮಧ್ಯಾಹ್ನ ಉಪ್ಪಿನಕಾಯಿ, ಕೋಸಂಬರಿ, ಪಲ್ಯ, ಪಾಯಸ, ಮಾಲ್ದಿ, ತುಪ್ಪ, ಚಿತ್ರಾನ್ನ, ಅನ್ನ, ಸಾಂಬಾರು, ಮಜ್ಜಿಗೆ ಬಡಿಸಿದರೆ, ರಾತ್ರಿ ಉಪ್ಪಿನ ಕಾಯಿ, ಅನ್ನ ಸಾಂಬಾರು, ಅನ್ನ ಮಜ್ಜಿಗೆ ಬಡಿಸಿದರು.

ಮೂರನೆಯ ದಿನ ಬೆಳಿಗ್ಗೆ ಉಪ್ಪಿಟ್ಟು ಮಾಡಿದರೆ, ಮಧ್ಯಾಹ್ನ ಉಪ್ಪಿನಕಾಯಿ, ಕೋಸಂಬರಿ, ಪಲ್ಯ, ಪಾಯಸ, ಬಾದೂಷ, ಚಿತ್ರಾನ್ನ ಅನ್ನ ಸಾಂಬಾರು, ಮಜ್ಜಿಗೆ ಇತ್ಯಾದಿ. ರಾತ್ರಿ ಉಪ್ಪಿನಕಾಯಿ, ಅನ್ನ ಸಾಂಬಾರು, ಅನ್ನ ಮಜ್ಜಿಗೆ ಸವಿದರು. ಪ್ರತಿದಿನ ಮುಂಜಾನೆ ೭ ಗಂಟೆಗೆ ಪ್ರಾರಂಭಿಸಿದ ದಾಸೋಹ ರಾತ್ರಿ ಹನ್ನೊಂದರವರೆಗೂ ನಿರಂತರವಾಗಿ ನಡೆಯುತ್ತಲೇ ಇತ್ತು.

ದಾಸೋಹ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಲು ನೆರವಾದ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಸಿಬ್ಬಂದಿ ವರ್ಗದವರು, ಸ್ವಯಂ ಸೇವಕರು, ಪ್ರಸಾದ ಸಿದ್ಧಪಡಿಸಿದವರು, ತರಕಾರಿ ಹಚ್ಚಿದವರು, ಕಸ ಗುಡಿಸಿದವರು, ಎಲೆ ಎತ್ತಿದವರು, ಸ್ವಚ್ಛಮಾಡಿದವರು, ಎಲ್ಲರೂ





ಅಭಿಮಾನಂದನಾರ್ಹರು, ಅವರೆಲ್ಲರೂ ನಿಷ್ಠೆಯಿಂದ ಶ್ರದ್ಧೆಯಿಂದ ಸೇವಾ ಮನೋಭಾವನೆಯಿಂದ ಕೆಲಸ ಮಾಡಿ ಸಮಾರಂಭದ ಯಶಸ್ಸಿಗೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಕಾರಣರಾದರು.

### ವಿಶೇಷ ಉಪನ್ಯಾಸ

ಸಮಾರಂಭ ನಡೆದ ಮೂರು ದಿನಗಳು ಬೆಳಿಗ್ಗೆ ೬ ಗಂಟೆಯಿಂದ ಬಿಜಾಪುರದ ಜ್ಞಾನಯೋಗಾಶ್ರಮದ ಪೂಜ್ಯಶ್ರೀ ಸಿದ್ಧೇಶ್ವರ ಸ್ವಾಮಿಗಳವರಿಂದ ವಿಶೇಷ ಉಪನ್ಯಾಸ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಉಪನ್ಯಾಸ ಕಾರ್ಯಕ್ರಮದಲ್ಲಿ ಸಹಸ್ರಾರು ಜನರು ಭಾಗವಹಿಸಿ ಉಪನ್ಯಾಸವನ್ನು ಕೇಳುವುದರ ಮೂಲಕ ತಮ್ಮ ಜ್ಞಾನ ದಿಗಂತವನ್ನು ವಿಸ್ತರಿಸಿಕೊಂಡರು.

### ಸಾಂಸ್ಕೃತಿಕ ಕಾರ್ಯಕ್ರಮ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ವತಿಯಿಂದ ಪ್ರತಿನಿತ್ಯ ಸಂಜೆ ೭.೩೦ಕ್ಕೆ ಸಂಗೀತ, ವಚನಗಾಯನ, ನೃತ್ಯ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಪ್ರೇಕ್ಷಕರನ್ನು ರಂಜಿಸುವಲ್ಲಿ ಯಶಸ್ವಿಯಾದವು.

ದಿನಾಂಕ ೨೮ ಬೆಳಿಗ್ಗೆ ೧೦ ಗಂಟೆಗೆ ಉದ್ಘಾಟನಾ ಸಮಾರಂಬಕ್ಕೆ ಮುನ್ನ ವಚನ ಗಾಯನ ಕಾರ್ಯಕ್ರಮ ನಡೆಯಿತು. ಪ್ರೇಕ್ಷಕರು, ಕಲಾವಿದರು ಸುಶ್ರಾವ್ಯವಾಗಿ ಹಾಡಿದ ವಚನಾಮೃತವನ್ನು ಸವಿದು ಸಂತೋಷಪಟ್ಟರು. ಅಂದು ರಾತ್ರಿ ನಡೆದ ಶ್ರೀ ಸಿದ್ಧಲಿಂಗೇಶ್ವರ



ಡಾ. ಜಿ.ಎಸ್. ಶಿವರುದ್ರಪ್ಪ ಅವರಿಂದ ಕೃತಜ್ಞತಾ ನುಡಿ




ಕರ್ನಾಟಕ ವಿಧಾನ ಪರಿಷತ್ ಸಭಾಪತಿಗಳಾದ ಶ್ರೀ ವೀರಣ್ಣ ಮತ್ತಿಕಟ್ಟೆ ಅವರಿಂದ ಪೂಜ್ಯ ಶ್ರೀಗಳವರ ಅಂಚೆ ಲಕೋಟೆ ಬಿಡುಗಡೆ



ಸುತ್ತೂರು ಜಗದ್ಗುರುಗಳಿಂದ ನುಡಿ ಸಂದೇಶ

ಸ್ವಾಮಿಗಯವರ ಬೆಳ್ಳಿಪಾಲಕಿ ಉತ್ಸವವನ್ನು ಕಣ್ಮನಗಳಲ್ಲಿ ತುಂಬಿ ಕೊಂಡು ಧನ್ಯರಾದರು. ವೇದಿಕೆ ಉಸ್ತುವಾರಿ ನೋಡಿಕೊಳ್ಳುವುದರ ಜೊತೆಗೆ ಸಾಂಸ್ಕೃತಿಕ ಕಾರ್ಯಕ್ರಮದ ಸಂಪೂರ್ಣ ಹೊಣೆ ಹೊತ್ತು ಯಶಸ್ವಿಯಾಗುವಂತೆ ಮಾಡಿದವರು ರಂಗಕರ್ಮಿ, ಕಿರುತೆರೆ ಕಲಾವಿದ ಶ್ರೀ ಕೆ.ವಿ ನಾಗರಾಜ್‌ಮೂರ್ತಿ ಅವರು ಎಲ್ಲರ ಅಭಿನಂದನೆಗೆ ಪಾತ್ರರಾದರು.

ದಿನಾಂಕ ೩ರಂದು ರಾತ್ರಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ನೂತನ ಬೆಳ್ಳಿ ರಥದಲ್ಲಿ ಶೂನ್ಯಸಿಂಹಾನಾರೋಹಣ ಉತ್ಸವ ನಡೆಯಿತು. ಸಹಸ್ರಾರು ಜನ ಭಕ್ತರು ಈ ಉತ್ಸವದಲ್ಲಿ ಭಾಗಿಯಾಗಿ ಶ್ರೀ ಸಿದ್ಧಲಿಂಗೇಶ್ವರರ ಕೃಪೆಗೆ ಪಾತ್ರರಾದರು.

ಶತಮಾನೋತ್ಸವ ಸಮಾರಂಭದ ಕೊನೆಯ ರಾತ್ರಿ ಶ್ರೀಮಠದ ಶ್ರೀ ಸಿದ್ಧಲಿಂಗೇಶ್ವರ ಕೃಪಾಪೋಷಿತ ನಾಟಕ ಮಂಡಳಿಯವರಿಂದ 'ಜಗಜ್ಯೋತಿ ಬಸವೇಶ್ವರ' ನಾಟಕ ಪ್ರದರ್ಶನ ನಡೆಯಿತು. ಸಾವಿರಾರು ಜನ ಪ್ರೇಕ್ಷಕರು ಇಡೀ ರಾತ್ರಿ ನಾಟಕವನ್ನು ನೋಡಿ ಆನಂದಪಟ್ಟರು. ಇಂಥಹ ನಾಟಕವನ್ನು ನೋಡಲು ಅವಕಾಶ ಕಲ್ಪಿಸಿಕೊಟ್ಟ ಶತಮಾನೋತ್ಸವ ಸಮಿತಿಗೆ ಮನದಲ್ಲಿಯೇ ಕೃತಜ್ಞತೆಯನ್ನು ಸಲ್ಲಿಸಿದರು.

### ಕೊನೆಮಾತು

ಶತಮಾನೋತ್ಸವ ಸಮಾರಂಭದ ಯಶಸ್ಸಿಗೆ ಸಾವಿರಾರು ಜನ ತಮ್ಮನ್ನು ಸಮರ್ಪಿಸಿಕೊಂಡರು. ಅವರೆಲ್ಲ ಸೇವಾ ಭಾವನೆಯಿಂದ, ನಿಸ್ವಾರ್ಥದಿಂದ ಶ್ರೀಮಠದ ಮೇಲಿನ ಅಭಿಮಾನದಿಂದ ಪೂಜ್ಯ ಶ್ರೀ ಶ್ರೀಗಳವರಲ್ಲಿಟ್ಟ ಭಕ್ತಿಯಿಂದ ಹಗಲು ರಾತ್ರಿಯೆನ್ನದೆ ಸೇವೆ ಸಲ್ಲಿಸಿದರು. ಅವರವರ ಪಾಲಿನ ಕರ್ತವ್ಯವನ್ನು ಶ್ರದ್ಧೆಯಿಂದ, ನಿಷ್ಠೆಯಿಂದ ಮಾಡುವುದರ ಮೂಲಕ ಸಮಾರಂಭದ ಯಶಸ್ಸಿಗೆ ಕಾರಣರಾದರು. ಅವರೆಲ್ಲರಲ್ಲಿಯೂ ತಾ ಮಾಡಿದೆನೆಂಬ ಭಾವನೆ ಎಲ್ಲಿಯೂ ಸುಳಿಯಲಿಲ್ಲ. ನಾವೆಲ್ಲ ನಿಮಿತ್ತಮಾತ್ರ, ಎಲ್ಲವೂ ಪೂಜ್ಯ ಶ್ರೀಗಳವರ ಮಾರ್ಗದರ್ಶನ ಆಶೀರ್ವಾದದಿಂದ ಸುಗಮವಾಗಿ ಯಾವುದೇ ರೀತಿಯ ಲೋಪದೋಷಗಳು ನುಸಳಿದಂತೆ ನಡೆಯಿತೆಂಬುದು ಪ್ರತಿಯೊಬ್ಬರ ಮನಸ್ಸಿನಿಂದ ಮೂಡಿ ಬಂದ ಅಂತರಾಳದ ಮಾತು. ಯಾವುದೇ ಕೆಲಸವನ್ನು ಪೂಜ್ಯರ ಹೆಸರೇಳಿ ಪ್ರಾರಂಭಿಸಿದರೆ ಸರಾಗವಾಗಿ ನಡೆಯುತ್ತದೆ ಎಂಬುದು ಶ್ರೀಮಠದ ಸೇವಾ ಮಣಿಹದಲ್ಲಿ ತೊಡಗಿಸಿಕೊಂಡವರ ಅನುಭವಕ್ಕೆ ಬಂದ ವಿಚಾರ. ಸಮಾರಂಭದ ಯಶಸ್ಸಿಗೆ ದುಡಿದವರೆಲ್ಲರ ಹೆಸರುಗಳನ್ನು ದಾಖಲಿಸುತ್ತಾ ಹೋದರೆ ಅದೊಂದು ಪುಸ್ತಕವೇ ಆಗುತ್ತದೆ. ಯಾರನ್ನು ಹೆಸರಿಸುವುದು, ಯಾರನ್ನು ಬಿಡುವುದು ಎಂಬ ಪ್ರಶ್ನೆ ನಮ್ಮ ಮುಂದೆ ಎದುರಾಗುತ್ತದೆ. ಎಲ್ಲರೂ ತಮ್ಮ ತಮ್ಮ ಪಾಲಿನ ಕರ್ತವ್ಯವನ್ನು




ಕಲಾವಿದರಿಂದ ವಚನ ಗಾಯನ




ಕಲಾವಿದರಿಂದ ಯಕ್ಷಗಾನ ಪ್ರಸಂಗ



ಮನಮೋಹಕ ನೃತ್ಯ ರೂಪಕ








ಪ್ರೇಕ್ಷಕರನ್ನು ರಂಜಿಸಿದ ವೀರಗಾಸೆ ನೃತ್ಯ




ಪ್ರೇಕ್ಷಕರ ಮನ ತಣಿಸಿದ ಜಾನಪದ ನೃತ್ಯ ರೂಪಕ



ಕಲಾವಿದರಿಂದ ಡೊಳ್ಳು ಕುಣಿತ ಪ್ರದರ್ಶನ

ಸೇವಾ ಭಾವನೆಯಿಂದ ಯಾವುದೇ ರೀತಿಯ ಪ್ರತಿಫಲಾಪೇಕ್ಷೆಯಿಲ್ಲದೆ ಮಾಡಿದವರೆ. ಆದರೂ ಕೆಲವರ ಹೆಸರನ್ನಾದರೂ ಈ ಸಂದರ್ಭದಲ್ಲಿ ದಾಖಲಿಸಿದೆ ಹೋದರೆ ಕರ್ತವ್ಯ ಲೋಪವಾಗುತ್ತದೆ.

ಶತಮಾನೋತ್ಸವ ಸಮಾರಂಭ ಸಮಿತಿಯ ಅಧ್ಯಕ್ಷರಾದ ನ್ಯಾಯಮೂರ್ತಿ ಡಾ. ವಿ.ಎಸ್. ಮಳಿಮಠ, ಗೌರವಾಧ್ಯಕ್ಷರಾದ ನ್ಯಾಯಮೂರ್ತಿ ಡಾ. ಶಿವರಾಜ್ ಪಾಟೀಲ್, ಕಾರ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಮುದ್ದಪ್ಪ, ಸಂಚಾಲಕರಾದ ಶ್ರೀ ವಿ. ಸೋಮಣ್ಣ, ಸದಸ್ಯರಾದ ಶ್ರೀ ಎಂ.ವಿ. ರಾಜಶೇಖರನ್, ಶ್ರೀ ಗೋಪಾಲ ಶ್ರೀನಿವಾಸನ್, ಶ್ರೀ ಎಲ್. ರೇವಣಸಿದ್ಧಯ್ಯ, ಶ್ರೀ ಗೊ.ರು. ಚನ್ನಬಸಪ್ಪ, ಡಾ. ಎಂ.ಎನ್. ಚನ್ನಬಸಪ್ಪ, ಶ್ರೀ ಹೆಚ್. ಶಿವಲಿಂಗಯ್ಯ, ಶ್ರೀ ಟಿ.ಕೆ. ನಂಜುಂಡಪ್ಪ, ಶ್ರೀ ಕೆ.ನ್. ಜಯಲಿಂಗಪ್ಪ, ಶ್ರೀ ಟಿ.ಎಂ. ಸ್ವಾಮಿ, ಶ್ರೀ ಎಂ.ಆರ್. ಸನ್ಮತಿಕುಮಾರ್, ಶ್ರೀ ಸಿ.ಎ. ಸೋಮೇಶ್ವರ ಗುಪ್ತ, ಇವರೆಲ್ಲರೂ ಕಳೆದ ಒಂದು ವರ್ಷದಿಂದ ಈ ಸೇವಾ ಮಣಿಹದಲ್ಲಿ ತಮ್ಮನ್ನು ಅರ್ಪಿಸಿಕೊಂಡರು. ಇವರೆಲ್ಲರ ಸೇವೆಯನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ.

ಅಂತೆಯೇ ಕರ್ನಾಟಕ ರತ್ನ, ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳರ ಶತಮಾನೋತ್ಸವ ಗ್ರಂಥ ಪ್ರಕಟಣಾ ಸಮಿತಿಯ ಮಹಾಪೋಷಕರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು, ಅಧ್ಯಕ್ಷರಾದ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ ಮಾರ್ಗದರ್ಶನವನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ. ಡಾ. ಜಿ.ಎಸ್. ಶಿವರುದ್ರಪ್ಪನವರ ಮಾರ್ಗದರ್ಶನದಲ್ಲಿ ೧೦೧ ಕೃತಿಗಳು ಪ್ರಕಟಗೊಂಡಿದ್ದು ಶ್ರೀಮಠದ ಇತಿಹಾಸದಲ್ಲಿ ಒಂದು ಅಪೂರ್ವ ದಾಖಲೆ. ಈ ಗ್ರಂಥಗಳು ಹೊರಬರಲು ಕಾರಣಕರ್ತರಾದವರೆಲ್ಲರೂ ಅಭಿನಂದನಾರ್ಹರು ಎಲ್ಲರೂ ಈ ಪುಣ್ಯ ಕಾರ್ಯದಲ್ಲಿ ಸೇವೆ ಮಾಡಲು ಅವಕಾಶ ದೊರೆತುದು ತಮ್ಮ ಪೂರ್ವಾಚಿತ ಪುಣ್ಯ ಎಂದು ಭಾವಿಸಿ ಸೇವೆ ಮಾಡಿದಿರುವುದರಿಂದ ಇಲ್ಲಿ ತಮ್ಮ ಹೆಸರನ್ನು ಪ್ರಸ್ತಾಪಿಸಿಲ್ಲ ಎಂದು ತಪ್ಪಾಗಿ ಭಾವಿಸುವುದಿಲ್ಲವೆಂದು ಭಾವಿಸುತ್ತಾ ಸಮಾರಂಭದ ಯಶಸ್ಸಿಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನೆರವಾದವರೆಲ್ಲರಿಗೂ ಈ ಮೂಲಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

*(ಈ ವರದಿಯನ್ನು ಸಿದ್ಧಪಡಿಸಲು ನಾನು ಸಮಾರಂಭದಲ್ಲಿ ಭಾಗಹಿಸಿ ಸಂಗ್ರಹಿಸಿದ ಮಾಹಿತಿಯ ಜೊತೆಗೆ ಪ್ರಜಾವಾಣಿ, ವಿಜಯ ಕರ್ನಾಟಕ, ಉದಯವಾಣಿ, ಸಂಯುಕ್ತ ಕರ್ನಾಟಕ ದಿನ ಪತ್ರಿಕೆಗಳಿಂದ ಮಾಹಿತಿಯ ನೆರವನ್ನು ಪಡೆದಿದ್ದೇನೆ. ಆಯಾ ಪತ್ರಿಕೆಗಳ ಸಂಪಾದಕರಿಗೆ, ವರದಿಗಾರರಿಗೆ ಕೃತಜ್ಞತೆಗಳು)*

## ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳ ಸಂಘ

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ

ಕರ್ನಾಟಕ ರತ್ನ, ಪರಮ ಪೂಜ್ಯ

# ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮ ಶತಮಾನೋತ್ಸವ

ರಾಷ್ಟ್ರಕವಿ **ಡಾ. ಜಿ.ಎಸ್. ಶಿವರುದ್ರಪ್ಪ** ಅವರಿಗೆ

## 'ಸಿದ್ಧಗಂಗಾ ಶ್ರೀ' ಪ್ರಶಸ್ತಿ ಪ್ರದಾನ

## ೪ ಫೆಬ್ರವರಿ, ೨೦೦೯

"ಈ ಪವಿತ್ರ ಭಾರತದಲ್ಲಿ ಹಿಂದೂಗಳಿದ್ದಾರೆ, ಮುಸ್ಲಿಮರಿದ್ದಾರೆ, ಕ್ರೈಸ್ತರಿದ್ದಾರೆ. ಸಿಖ್ಖರಿದ್ದಾರೆ, ಜೈನರಿದ್ದಾರೆ, ಬೌದ್ಧರಿದ್ದಾರೆ, ಬ್ರಾಹ್ಮಣರಿದ್ದಾರೆ, ಲಿಂಗಾಯತರಿದ್ದಾರೆ, ಒಕ್ಕಲಿಗರಿದ್ದಾರೆ, ಅಸ್ಪೃಶ್ಯರಿದ್ದಾರೆ. ಆದರೆ ನಾನು ಹುಡುಕುತ್ತಿರುವುದು ಮನುಷ್ಯರನ್ನು. ದಯಮಾಡಿ ಹೇಳಿ, ಅವರೆಲ್ಲಿದ್ದಾರೆ?" ಎಂಬ ಗಂಭೀರ ಪ್ರಶ್ನೆ ಕೇಳಿ ಉತ್ತರಕ್ಕಾಗಿ ಕಾದಿರುವ ಕನ್ನಡದ ಶ್ರೇಷ್ಠ ಕವಿ, ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು.

ಈ ಕನ್ನಡ ಕವಿಚೇತನದ ಹುಟ್ಟೂರು, ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ. ತಂದೆ ಶಾಂತವೀರಪ್ಪ; ತಾಯಿ ವೀರಮ್ಮ. ೧೯೨೬ರ ಫೆಬ್ರವರಿ ೭, ಅವರ ಜನ್ಮದಿನ. ತಂದೆ ಶಾಲಾ ಮಾಸ್ತರ. ಊರಿಂದ ಊರಿಗೆ ವರ್ಗ. ಮಗನಿಗೂ ಅದೇ ಮಾರ್ಗ. ಹೊನ್ನಾಳಿಯಲ್ಲಿ ಓ ನಾಮ, ಕೋಟೆಹಾಳಿನಲ್ಲಿ ಪಾಟಿ ಪುಸ್ತಕ. ರಾಮಗಿರಿಯಲ್ಲಿ ಎಬಿಸಿಡಿ. ಬೆಲಗೂರಿನಲ್ಲಿ ಭಿನ್ನರಾಶಿ. ದಾವಣಗೆರೆಯಲ್ಲಿ ಆಲ್ಜಿಬ್ರಾ-ಜಾಮಿಟ್ರಿ. ಇಂಟರ್ ಮೀಡಿಯಟ್ ಕಲಿಕೆ ತುಮಕೂರಿನಲ್ಲಿ. ಅನ್ನ-ವಸತಿಯ ಆಶ್ರಯ ಶ್ರೀ ಸಿದ್ಧಗಂಗಾ ಮಠ. ಹೀಗೆ ಕಲಿಕೆಯ ಅವಧಿಯಲ್ಲೇ ಲೋಕ ಸಂಚಾರದ ಅನುಭವ.

ಶಾಲಾ ಮಾಸ್ತರನ ಮಗನೆಂದರೆ ಕೇಳಬೇಕೆ? ಹಾಸಿ ಹೊದ್ದರೂ ಮಿಕ್ಕಿ ಇನ್ನೊಬ್ಬರಿಗೆ ಹಂಚುವಷ್ಟು ಬಡತನ. ಹಂಚಿಕೊಳ್ಳುವವರು ದೊರೆಯದಿದ್ದಾಗ ಅದನ್ನೇ ಮಡಿಚಿ ತಾನೇ ಹಾಸಿ ಹೊದ್ದ ಅನಿವಾರ್ಯ. ಪದವಿ ಶಿಕ್ಷಣ ಪಡೆಯಲು ಹಣದ ಕೊರತೆ. ಗಳಿಸಿ ಉಳಿಸಿಯಾದರೂ ಕಲಿಯುವ ಹಂಬಲ. ಗುಬ್ಬಿ ತಾಲೂಕ್ ಕಛೇರಿಯಲ್ಲಿ ನೌಕರಿ. ತಿಂಗಳಿಗೆ ೩೫ ರೂ. ಸಂಬಳದ ಗುಮಾಸ್ತಗಿರಿ.

ಕೂಡಿಟ್ಟ ಹಣದೊಂದಿಗೆ ಮೈಸೂರಿಗೆ ಪ್ರಯಾಣ. ೧೯೪೯ರಲ್ಲಿ ಪ್ರಥಮ ದರ್ಜೆಯಲ್ಲಿ ಬಿ.ಎ. ಆನರ್ಸ್ ಪದವಿ. ಎರಡು ಚಿನ್ನದ ಪದಕ, ಒಂದು ಬಹುಮಾನ. ೧೯೫೩ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲೇ ಪ್ರಥಮ ಸ್ಥಾನದಲ್ಲಿ ಸ್ನಾತಕೋತ್ತರ ಪದವಿ. ಮೂರು ಚಿನ್ನದ ಪದಕ, ಎರಡು ಬಹುಮಾನ, ೧೯೬೫ರಲ್ಲಿ ಡಾಕ್ಟರೇಟ್ ತಂದುಕೊಟ್ಟ ಅವರ ಮಹಾ ಪ್ರಬಂಧ - 'ಸೌಂದರ್ಯ ಸಮೀಕ್ಷೆ'. ಮಹಾ ಕವಿ ಕುವೆಂಪು ಅವರದೇ ಮಾರ್ಗದರ್ಶನ.





ಅಧ್ಯಾಪಕ ವೃತ್ತಿಯ ಭೂಮಿಪೂಜೆ ದಾವಣಗೆರೆಯ ಡಿ.ಆರ್.ಎಂ. ಕಾಲೇಜಿನಲ್ಲಿ. ನಂತರ ಮೈಸೂರು ಯುವರಾಜ ಮತ್ತು ಮಹಾರಾಜ ಕಾಲೇಜುಗಳಲ್ಲಿ ಸೇವೆ. ೧೯೪೯ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಾಪಕ ಹುದ್ದೆ, ೧೯೬೩ರಲ್ಲಿ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥ ಸ್ಥಾನ. ೧೯೬೬ ರಿಂದ ೧೯೮೬ರ ವರೆಗೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕ ಸೇವೆ, ನಿರ್ದೇಶಕರಾಗಿ ನಿವೃತ್ತಿ. ೧೯೮೩ರಲ್ಲಿ ವಿಶ್ವವಿದ್ಯಾಲಯ ಗ್ರಾಂಟ್ಸ್ ಕಮಿಷನ್ನಿನಿಂದ ರಾಷ್ಟ್ರೀಯ ಉಪನ್ಯಾಸಕರಾಗಿ ನೇಮಕ. ೧೯೯೪ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಪೀಠಕ್ಕೆ ಸಂದರ್ಶಕ ಪ್ರಾಧ್ಯಾಪಕ. ೧೯೯೭ ರಿಂದ ೧೦ ವರ್ಷ ಕಾಲ ಕೇಂದ್ರ ಸಾಹಿತ್ಯ ಅಕಾಡಮಿಯ ಸದಸ್ಯತ್ವ. ೧೯೮೭ ರಿಂದ ೩ ವರ್ಷ ಕರ್ನಾಟಕ ಸಾಹಿತ್ಯ ಅಕಾಡಮಿ ಅಧ್ಯಕ್ಷತೆ.

ಇದಿಷ್ಟು ಡಾ. ಜಿ.ಎಸ್. ಶಿವರುದ್ರಪ್ಪನವರ ಜೀವನ ಸಂಗತಿಗಳು. ಆದರೆ ಅವರು ನಮ್ಮ ರಾಜ್ಯಕ್ಕೆ, ರಾಷ್ಟ್ರಕ್ಕೆ ಪರಿಚಿತರಾದುದು ಕೇವಲ ಈ ವೃತ್ತಿಯಾತ್ರೆಯಿಂದಲ್ಲ; ಕಾವ್ಯ ಯಾತ್ರಿಕರಾಗಿ. ಇಂದು ಜಿ.ಎಸ್.ಎಸ್. ಎಂಬುದು ಕನ್ನಡ ಕಾವ್ಯಲೋಕದ ಅಗ್ರಪಂಕ್ತಿಯ ಹೆಸರು. ಅವರು ಕೇವಲ ಕವಿಯಲ್ಲ; ಪ್ರಯೋಗಶೀಲ ಕವಿ, ಪ್ರಗತಿಶೀಲ ಕವಿ, ಪ್ರಕೃತಿಪೂಜೆಯ ಕವಿ, ಪ್ರತಿಮಾಸೃಷ್ಟಿಯ ಕವಿ; ಆಧುನಿಕ ಸಂದರ್ಭದ ಪ್ರಾತಿನಿಧಿಕ ಕವಿ.

ಸಹಜತೆ, ಸಭ್ಯತೆಗಳು ಜಿ.ಎಸ್.ಎಸ್. ಅವರ ಕಾವ್ಯದ ವಿಶೇಷ. ಅವರ ಕಾವ್ಯ ಹೆಸರಿಗಾಗಿ ಕೊಸರಿ ಬರುವ ಉಸಿರಲ್ಲ; ಮಳೆ - ಮಣ್ಣಿನ ಸಂಯೋಗದಿಂದ ಮೊಳೆದೇಳುವ ನಿಸರ್ಗದ ಸಹಜ ಹಸಿರು! 'ಕಾಲ ಮತ್ತು ಮಾನವ ಇವೆರಡರ ಸಂಬಂಧ ಹಾಗೂ ಸಂಘರ್ಷ, ನಾಗರಿಕ ಬದುಕಿನಲ್ಲಿ ಮನುಷ್ಯ ದಿನದಿಂದ ದಿನಕ್ಕೆ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಿರುವ ದುರಂತ ಮತ್ತು ವ್ಯಕ್ತಿ-ವ್ಯಕ್ತಿಗಳ ನಡುವಣ ಸಂಪರ್ಕ ಕಡಿದು ಉಂಟಾಗಿರುವ ಏಕಾಕಿತನದ ವಿಷಾದ - ಈ ಮೂರು ವಿಷಯಗಳ ಚಿಂತನದ ಫಲ' ಅವರ ಕಾವ್ಯ ರಾಶಿ. 'ಸೌಂದರ್ಯ, ಮಾಧುರ್ಯ ಮತ್ತು ಗಾಂಭೀರ್ಯಗಳಿಂದ ಕೂಡಿದ ಭಾವ-ಭಾಷೆ-ಬುದ್ಧಿಗಳ ಸಂಯೋಜನೆಯೇ ಕಾವ್ಯ' ಎನ್ನುವ ಮಾತಿಗೆ ಶಿವರುದ್ರಪ್ಪನವರ ಕಾವ್ಯ ಒಂದು ಸಮರ್ಥ ಸಾಕ್ಷಿಯಾಗಿ ನಿಲ್ಲುತ್ತದೆ.

ಡಾ. ಜಿ.ಎಸ್. ಶಿವರುದ್ರಪ್ಪನವರ ಸಾಹಿತ್ಯ ಕೃಷಿ ಭೂಮಿಯಲ್ಲಿ ಬೆಳೆದು ನಿಂತಿರುವ ಸಮೃದ್ಧ ಪೈರಿನಲ್ಲಿ 'ಸಾಮಗಾನ'ದಿಂದ 'ಅಗ್ನಿಪರ್ವತ'ದವರೆಗೆ ೧೪ ಕವನ ಸಂಗ್ರಹಗಳಿವೆ. 'ಕರ್ಮಯೋಗಿ'ಯಿಂದ 'ಕುವೆಂಪು - ಒಂದು ಪುನರಾವಲೋಕನ'ದ ವರೆಗೆ ೨೬ ಗದ್ಯ ಗ್ರಂಥಗಳಿವೆ. ಅವರ ಸಂಪಾದನೆಯ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಾರ್ಷಿಕದ ಒಟ್ಟು ೩೦ ಸಂಪುಟಗಳಿವೆ. ಅವರ 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ' ಕೃತಿಗೆ 'ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ' ಸಂದಿದೆ. ಅವರ 'ಕಾವ್ಯಾರ್ಥ ಚಿಂತನ' ಕೇಂದ್ರ ಮತ್ತು ರಾಜ್ಯ ಸಾಹಿತ್ಯ ಅಕಾಡಮಿಗಳೆರಡರ ಪ್ರಶಸ್ತಿಗಳನ್ನೂ ಗಳಿಸಿದೆ.

ರಷ್ಯಾ, ಅಮೇರಿಕಾ ಇಂಗ್ಲೆಂಡ್, ಯೂರೋಪ್, ಥಾಯ್ಲೆಂಡ್, ಸಿಂಗಪುರ ಮೊದಲಾದ ವಿದೇಶಗಳಲ್ಲಿ ಪ್ರವಾಸ ಮಾಡಿರುವ ಡಾ. ಜಿ.ಎಸ್. ಶಿವರುದ್ರಪ್ಪ ಅವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಪ್ರೊ. ಭೂಸನೂರ ಮಠ ಪ್ರಶಸ್ತಿ, ಪಂಪ ಪ್ರಶಸ್ತಿ, ಗೊರೂರು, ಮಾಸ್ತಿ ಮತ್ತು ಅನಕೃ ಪ್ರಶಸ್ತಿಗಳು - ಹೀಗೆ ಅನೇಕ ಪ್ರತಿಷ್ಠಿತ ಪ್ರಶಸ್ತಿಗಳ ಪರಿವಿಡಿಯೇ ಇದೆ. ಈ ಪರಿವಿಡಿಯ ಮೇಲಿನ ಗಿರಿಶಿಖರ ೨೦೦೬ರಲ್ಲಿ ಕರ್ನಾಟಕ ಸರ್ಕಾರ ನೀಡಿರುವ 'ರಾಷ್ಟ್ರಕವಿ' ಪುರಸ್ಕಾರ.

ಡಾ. ಶಿವರುದ್ರಪ್ಪನವರು ೬೧ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು. ಕುವೈತ್‌ನಲ್ಲಿ ನಡೆದ ವಿಶ್ವ ಕನ್ನಡ ಸಂಸ್ಕೃತಿ ಸಮ್ಮೇಳನದ ಸರ್ವಾಧ್ಯಕ್ಷರು. ಜೊತೆಗೆ ಪಾಲುಗೊಂಡ, ಅಧ್ಯಕ್ಷತೆ ವಹಿಸಿದ, ಉದ್ಘಾಟನೆ ಮಾಡಿದ

ಕವಿಗೋಷ್ಠಿಗಳು ಮತ್ತಿತರ ಸಾಹಿತ್ಯ ಸಮಾವೇಶಗಳ ಸಂಖ್ಯೆಗೆ ಲೆಕ್ಕವಿಲ್ಲ. ಅವರು ಕನ್ನಡ ಸಾಹಿತ್ಯ-ಸಂಸ್ಕೃತಿಗಳಿಗೆ ಸಲ್ಲಿಸಿರುವ ಅನುಪಮ ಸೇವೆಗಾಗಿ ಕನ್ನಡ ವಿಶ್ವವಿದ್ಯಾಲಯ 'ನಾಡೋಜ' ಗೌರವ ನೀಡಿದೆ. ಮೈಸೂರು, ಬೆಂಗಳೂರು ಮತ್ತು ಕುವೆಂಪು ವಿಶ್ವವಿದ್ಯಾಲಯಗಳು ಗೌರವ ಡಿ.ಲಿಟ್ ನೀಡಿ ಪುರಸ್ಕರಿಸಿವೆ. ಜಿ.ಎಸ್.ಎಸ್. ಅವರಿಗೆ ೫೦ ತುಂಬಿದಾಗ ಅಭಿಮಾನಿಗಳು ಅರ್ಪಿಸಿದ ಅಭಿನಂದನ ಗ್ರಂಥ 'ಸ್ನೇಹ ಕಾರ್ತೀಕ' ಅವರ ಘನವ್ಯಕ್ತಿತ್ವದ ಪ್ರತೀಕ. ಆ ಗ್ರಂಥಕ್ಕೆ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನೀಡಿರುವ ಸಂದೇಶದಲ್ಲಿ 'ಶಿವರುದ್ರಪ್ಪ ಕಷ್ಟ ಸಹಿಷ್ಣು. ನೇರ ಸ್ವಭಾವದ ಸರಳ ಜೀವಿ' ಎಂದಿದ್ದಾರೆ.

ಮಾತು ಜ್ಯೋತಿರ್ಲಿಂಗವಾಗಬೇಕಾದರೆ ಅದು ಅರ್ಥಪೂರ್ಣವಾಗಿರಬೇಕು; ಸತ್ಯ ಶುದ್ಧವಾಗಿರಬೇಕು. ಶಿವರುದ್ರಪ್ಪನವರ ಸಾಹಿತ್ಯದಲ್ಲಿ ಅಂತಹ ಜ್ಯೋತಿರ್ಲಿಂಗಗಳ ವಿಶ್ವರೂಪ ದರ್ಶನವೇ ಆಗುತ್ತದೆ. ನಾಡಿನ ಜ್ಞಾನ ಮತ್ತು ಅನ್ನದಾಸೋಹದ ಮಹಾಮನೆಯಾಗಿರುವ ಶ್ರೀ ಸಿದ್ಧಗಂಗಾ ಮಠದ ವಿದ್ಯಾರ್ಥಿಯಾಗಿದ್ದ ಶಿವರುದ್ರಪ್ಪನವರು "ಸಿದ್ಧಗಂಗೆಯ ಶ್ರೀಚರಣದಲ್ಲಿ" ಎಂದು ರಚಿಸಿರುವ ಒಂದು ಸುಂದರ ಗೀತೆಯ ನಾಲ್ಕು ಸಾಲುಗಳು ಹೀಗಿವೆ:

*ಸದ್ದುಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆ ಏರಿದೆ;*
*ಕಾಯಕವೆ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ.*
*ಕಾವಿಯುಡುಗೆಯನುಟ್ಟು ನಭವೆ ಕಿರಣ ಹಸ್ತವ ಚಾಚಿದೆ;*
*ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರೆದಿದೆ!*

ಈ ಗೀತೆ ಸಿದ್ಧಗಂಗಾ ಕ್ಷೇತ್ರದ ದರ್ಶನಮಂತ್ರವಾಗಿ ಶ್ರೀಮಠದ ಆವರಣದಲ್ಲಿ ಕಂಗೊಳಿಸುತ್ತಿದೆ.

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆಯುವ ಸೇವಾ ಕಾರ್ಯಗಳಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳ ಸಂಘವು ತನ್ನ ವಿನೀತ ಸೇವೆ ಸಲ್ಲಿಸುತ್ತಿದೆ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ದಿವ್ಯಾಶೀರ್ವಾದದ ರಕ್ಷೆ ಪಡೆದಿರುವ ಸಂಘದ ಸದಸ್ಯರು ಪೂಜ್ಯರ ಜನ್ಮ ಶತಮಾನೋತ್ಸವ ಸ್ಮರಣೆಯಾಗಿ, ನಾಡಿನ ಸಾರ್ವಜನಿಕ ಕ್ಷೇತ್ರದಲ್ಲಿ ಶ್ರೇಷ್ಠ ಸಾಧನೆಗೈದ ಗೌರವಾನ್ವಿತರೊಬ್ಬರಿಗೆ ಪ್ರತಿ ವರ್ಷ ಒಂದು ಲಕ್ಷ ರೂ.ಗಳ ಗೌರವಧನದೊಂದಿಗೆ 'ಸಿದ್ಧಗಂಗಾ ಶ್ರೀ' ಎಂಬ ಪ್ರಶಸ್ತಿ ನೀಡಲು ನಿರ್ಧರಿಸಿದೆ. ಅಂತೇ ಈ ಪ್ರಥಮ ಪ್ರಶಸ್ತಿಯನ್ನು ಪೂಜ್ಯರ ಸಾನ್ನಿಧ್ಯದಲ್ಲೇ, ಶ್ರೀ ಮಠದ ಹಳೆಯ ವಿದ್ಯಾರ್ಥಿಯಾಗಿ ಈಗ ರಾಷ್ಟ್ರ ಪ್ರಸಿದ್ಧಿ ಪಡೆದಿರುವ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರಿಗೆ ಪ್ರದಾನಮಾಡಲು ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳ ಸಂಘ ಅಭಿಮಾನಪಡುತ್ತದೆ.

'ಮೂಕ ಬೇಸರದ ಗೋರಿಯಾಗಿರುವ ಈ ಲೋಕ' ದಲ್ಲಿ 'ನೂರು ವರ್ಣದ ನೂರು ರಾಗ' ದ ಮಧುರಗೀತೆ ಹಾಡಿ 'ಏಳು ಸುತ್ತಿನ ಮಲ್ಲಿಗೆ' ಅರಳಿಸಿರುವ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರಿಗೆ ಬುದ್ಧ-ಬಸವರ ರಕ್ಷೆಯಿದೆ. ಪೂಜ್ಯ ಸಿದ್ಧಗಂಗಾ ಶ್ರೀಗಳ ಆಶೀರ್ವಾದವಿದೆ. ಅವರಿಗೆ ನಾಡಿನ ಜನತೆಯ ಪರವಾಗಿ ಶುಭ ಹಾರೈಸುತ್ತೇವೆ.

೪-೨-೨೦೦೯
ಸಿದ್ಧಗಂಗಾ

ಸರ್ವಸದಸ್ಯರು
ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘ



## ಏಪ್ರಿಲ್ 1, 2009 ರಂದು ಪರಮಪೂಜ್ಯ ಶ್ರೀಗಳವರಿಗೆ ಭಕ್ತಿ ಸಮರ್ಪಣೆ










